# ಕೊರವಂಜಿ

ಸೆಪ್ಟೆಂಬರ್ ೧೯೫೧



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ಮೇಸ್ತ್ರಿ
ಶ್ರೀ॥ "ವಸು"
ಶ್ರೀ॥ ಯಜ್ಞಪಶು
ಶ್ರೀ॥ ಬಚ್ಚ
ಶ್ರೀ॥ ನಾಡಿಗೇರ್ ಗೋವಿಂದರಾವ್
ಶ್ರೀ॥ ಸಾರಥಿ
ಶ್ರೀ॥ ಎ. ಎಸ್. ರಾಮಕೃಷ್ಣ
ಶ್ರೀ॥ ಕಾಪುತ್ರ್
ಶ್ರೀ॥ ಸಶೇಷ
ಶ್ರೀ॥ ಪ್ರಸಾದ್
ಶ್ರೀ॥ ಕುಮಾರ್
ಶ್ರೀ॥ ಜಿ. ಪಿ. ಸು.
ಶ್ರೀ॥ ಶಿವು

ಇತ್ಯಾದಿ, ಇತ್ಯಾದಿ.

ತಿಳಿನಗೆಯ ಮಾಸಪತ್ರಿಕೆ

ಕೇವಲ ನಾಲ್ಕಾಣೆ.

ಮನೆಗೆ ಶಾಂತಿ ! ಮನಕ್ಕೆ ಶಾಂತಿ !! ದೇಹಕ್ಕೆ ವಿಶ್ರಾಂತಿ !!!

ಕಣ್ಣುಗಳಿಗೆ ತಂಪು ಬೀರುವುದು,
ದೇದೀಪ್ಯಮಾನ

# ಮೈಸೂರು ಬಲ್ಬು




ಅದು ಭಾರತದ್ದು !
ಸುಲಭ ಬೆಲೆಯದು !
ಹೆಚ್ಚು ಬಾಳಿಕೆ ಬರುವುದು !!

ಫೋನ್: 2026 ಗ್ರಾಮ್ಸ್: 'Mysorlamp'

ಮೈಸೂರು ಲ್ಯಾಂಪ್ ವರ್ಕ್ಸ್ ಲಿ

ಮಲ್ಲೇಶ್ವರಂ : : : : ಬೆಂಗಳೂರು-3




ಸಂಪುಟ ೧೦ | ಸೆಪ್ಟೆಂಬರ್ ೧೯೫೧ | ಸಂಚಿಕೆ ೫

## ಕು ಹ ಕಿ ಡಿ ಗ ಳು

★ ★

ಕೊರಿಯಾ 'ಸೀಸ್‌ಫೈರ್' ಸಂಧಾನವನ್ನು ಕೇಸಾಂಗ್‌ಗಿಂತ ತಿರುಪತಿಯಲ್ಲಿ ನಡೆಸಿದ್ದರೆ ಸಾರ್ಥಕವಾಗುತ್ತಿತ್ತು ಅಲ್ಲವೇ?

* * *

ಜಪಾನ್ ಶಾಂತಿ ಸಮ್ಮೇಳನಕ್ಕೆ ರಷ್ಯಾ ಬರುತ್ತೇನೆ ಎಂದಮೇಲೆ, ಸಾನ್‌ಫ್ರಾನ್ಸಿಸ್ಕೊನಲ್ಲಿ ಕೆಂಪು ಹಾಸಿಯನ್ನು ಸಿದ್ಧಮಾಡುತ್ತಿದ್ದಾರಂತೆ.

* * *

ಈ ಸಾರಿ ಗೋಕುಲಾಷ್ಟಮಿ ಹಬ್ಬವನ್ನು ಸಾರ್ವಜನಿಕರು ಹೋಟಲುಗಳಲ್ಲಿ ವಿಜೃಂಭಣೆಯಿಂದ ನೆರವೇರಿಸಿದರಂತೆ

* * *

ಸಾರ್ವತ್ರಿಕ ಚುನಾವಣೆಗಳ ಕಾಲಕ್ಕೆ ಸರಿಯಾಗಿ ಕ್ರಿಕೆಟ್ ಮ್ಯಾಚ್‌ಗಳು ಬರುವುದರಿಂದ, ಚುನಾವಣೆಗಳಿಗೆ ಅನಾನುಕೂಲವಾಗಬಹುದು ಎಂದು ರಾಜಕೀಯ ಪಕ್ಷ ಒಂದು ತಕರಾರು ಅರ್ಜಿ ಹಾಕುತ್ತದೆಯಂತೆ.

* * *

ನಮ್ಮ ಹುಡುಗ ಹಿಂದಿ ಕಲಿಯುಕ್ಕೆ ಶುರುಮಾಡಿದಮೇಲೆ, ಜಟಕಾ ಕುದುರೆಗಳು ಕೂಡ ಅವನ ಮಾತು ಅರ್ಥಮಾಡಿಕೊಳ್ಳುತ್ತಿವೆ ಎಂದು ಆಚಾರ್ಯರು ಬರೆದಿದ್ದಾರೆ.

* * *

ಅಧಿಕಾರದಲ್ಲಿಲ್ಲದ ರಾಜಕೀಯ ಪಕ್ಷಗಳೆಲ್ಲವೂ ಭಾಷಾವಾರು ಪ್ರಾಂತ್ಯ ಮಾಡಿಯೇ ಮಾಡುತ್ತೇವೆ ಎಂದು ಘೋಷಿಸುತ್ತಿದ್ದಾರಂತೆ.

—ಅಧಿಕಾರಕ್ಕೆ ಬರುವ ತನಕ!

* * *

ಪರ್ಷಿಯ ಎಣ್ಣೆ ಸಂಧಾನದಲ್ಲಿ ಶ್ರೀ ಹ್ಯಾರಿಮನ್ನರು ನಪಾಸಾದ ಕಾರಣ ಈಗ ರಷ್ಯನರು ಸಂಧಾನ ಸಫಲವಾಗಲು ತಮ್ಮ ಪ್ರತಿನಿಧಿಯನ್ನ ಕಳಿಸುತ್ತಾರೆ ಎನ್ನುವುದು ಖಚಿತವಾಗಿಲ್ಲವಂತೆ.

* * *

"ಬಿಗಿದ ಮುಷ್ಟಿ" ಯನ್ನು ನೋಡಿ ಜೋಲೂಯಿ ಹೇಳಿದನಂತೆ 'ಓಹೋ! ನಾನು ಸಿದ್ಧ! ಒಂದು ಪಟ್ಟು ನೋಡಿಯೇ ಬಿಡುತ್ತೇನೆ' ಎಂದ.

* * *

ರಾಜಿ ಆಗದೆ ಇದ್ದರೆ ರಾಜೀನಾಮೆ.

—ಹಾಗೇ, ಬಾಜಿ ಗೆಲ್ಲದೆ ಇದ್ದರೆ ಬಾಜೀನಾಮೆ ಅನ್ನಬಹುದೆ?

* * *

ಕೇರಳದ ರಾಜಕೀಯ ಬಿಕ್ಕಟ್ಟು, ವಯಸ್ಕರ ಮತದಾನ ಬಂದಮೇಲೆ ನಿವಾರಣೆಯಾಗೇ ಆಗುತ್ತೆ! ಹೇಳಿಕೆ.

—ಯಾಕೆ! ಮತದಾನ ಬಂದಮೇಲೆ ಹೆಂಗಸರೇ ಅತ್ತಿ ಪ್ರಾಧಾನ್ಯಕ್ಕೆ, ಪ್ರಬಲಕ್ಕೆ ಬರುತ್ತಾರೆ ಅಂತಲೋ!

* * *

"ಚೌತಿ ಚಂದ್ರನನ್ನು ಈ ಬಾರಿಯಾದರೂ ನೀವು ನೋಡಬೇಡಿ" ಎಂದು ಮಹಾ ಸಭೆಯವರು ತಂತಿ ಕೊಟ್ಟಿದ್ದಾರಂತೆ, ಪಂ॥ ನೆಹ್ರೂ ಅವರಿಗೆ.

* * *

ರಂಗೋಲಿ ಹಾಕ್ತಾ ವಳ್ಳಿಯಮ್ಮ ಹೇಳಿದಳಂತೆ. "ಅಯ್ಯೋ! ಯಾಕಾದರೂ ಕಷ್ಟಪಡ್ತೇನೋ ನಾನು, ಕೆರದಲ್ಲಿ ಮೆಟ್ಟುತ್ತಾರೆಯೇ ವಿನಹಾ ಕಣ್ಣಲ್ಲೂ ನೋಡುಲ್ಲ ಜನ" ಅಂತ.

---

# ಉರಿಗಾಳು

ಶ್ರೀ ಟಾಂಡನ್ನರವರು ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಟ ಪಕ್ಷದಲ್ಲಿ, ಕೃಪಲಾನಿ ಪಕ್ಷದ ಅಧ್ಯಕ್ಷತೆ ವಹಿಸಿಕೊಳ್ಳುತ್ತಾರೆ ಎಂದನ್ನುವುದು ಶುದ್ಧ ತಿಳಿಗೇಡಿತನ.

*　　　*　　　*

‘ಮೈಸೂರು ಸಂಸ್ಥಾನ ಮತ್ತು ಕೊಡಗಿನಲ್ಲಿ ಇನ್ನು ೨೪ ಗಂಟೆ ಕಾಲ ಮಳೆಯ ಸೂಚನೆ ಇಲ್ಲ’ ಎಂದು ಹವಾ ಭವಿಷ್ಯ ಹೇಳಿತ್ತು.

—ಆ ಪತ್ರಿಕೆ ಮಳೆಯಿಂದ ತೋಯ್ದಿತ್ತು.

*　　　*　　　*

ಮಹಿಳೆಯರಿಗೆ ಪ್ರಾಧಾನ್ಯತೆ ಕೊಟ್ಟು, ಮಂತ್ರಿ ಮಂಡಲಕ್ಕೆ ಸೇರಿಸಿದರೆ, ಅಂತಹವರಿಗೆ ಹಣಕಾಸಿನ ಇಲಾಖೆ ಕೊಡಬೇಕು. ಆಗ ಉಳಿತಾಯದ ಬಜೆಟ್ ಬರಬಹುದು, ಎಂದೊಬ್ಬರು ಸೂಚಿಸಿದ್ದಾರೆ.

*　　　*　　　*

ದಾವಣಗೆರೆ ಸಮ್ಮೇಳನದಲ್ಲಿ ಪಕೋಟಿ ಹೋಗಬೇಕು ಅಂತ ಪಕೋಟಿ ಇಲ್ಲದೆ ಹಲವರು ಹಾರಾಡಿದರಂತೆ.

*　　　*　　　*

ಜೂಜಾಡುತ್ತಿದ್ದವರ ಹತ್ತಿರ ಇದ್ದ ೯೭೦ ರೂಪಾಯಿಗಳನ್ನು ಪೋಲೀಸರು ವಶಪಡಿಸಿಕೊಂಡರು. (ಪತ್ರಿಕೆ)

—ಅಂದರೆ!

*　　　*　　　*

ಸಣ್ಣ ಪುಟ್ಟ ಟೋಪಿಯವರೆಲ್ಲಾ ಈಗ ‘ಸೆಕೆಂಡ್ ಲಿಸ್ಟ್‌ನಲ್ಲಿ ಸೀಟ್ ಕೊಡಿಸ್ತೀನಿ ಬಾರಯ್ಯಾ’ ಅಂತ ಹೇಳ್ತಾ ಜೀವನ ಮಾಡುತ್ತಿದ್ದಾರೆಂಬುದು ಸುಳ್ಳಂತೆ.

*　　　*　　　*

ಹುಲಿಯು ಮನುಷ್ಯನನ್ನು ತಿಂದಿತು. (ಸುದ್ದಿ)

—ಏನುಮಹಾ ಸುದ್ದಿಯೋ! ಈ ಕಾಲದಲ್ಲಿ ಮನುಷ್ಯನು ಮನುಷ್ಯನನ್ನೇ ಕಿತ್ತುಕೊಂಡು ತಿನ್ನೋವಾಗ!

*　　　*　　　*

ಜೇಳಿಗಳ ಮೇಲಿನ ಪ್ರತಿಬಂಧಕ ಹೋಯಿತು. (ಪತ್ರಿಕೆ)

—ಅಂದಮೇಲೆ ಜೇಳಿ ಹಾರಾಟಗಾರರ ಜೇಳಿ ಬಿಡ್ಯೊಲ್ಲ ಅಂತಲೇ!

* * *

“ಹೆಚ್ಚು ಸಂಖ್ಯೆಯಲ್ಲಿ ಕೋತಿಗಳು ನಮ್ಮ ದೇಶದಿಂದ ರಫ್ತಾಗುತ್ತಿವೆ ಅದು ತಪ್ಪಬೇಕು” ಎಂದೊಬ್ಬ ಜನನಾಯಕರು ಬೊಬ್ಬೆ ಇಡುತ್ತಿದ್ದಾರಂತೆ.

—ಕೇವಲ ಆತ್ಮ ಸಂರಕ್ಷಣಾ ಮಾರ್ಗಸ್ವಾಮಿಾ ಅದು!

* * *

ಒಂದು ಸೇರು ಜೋಳಾನ ಒಂದು ಸೂಳೆ ಕೈಲಿ ಕೊಟ್ಟೆ. ಅವಳು ಅದನ್ನು ಕುಟ್ಟಿ ಮುಗಿಸಿದರೂ ಕೂಡ ಸರ್ಕಾರ ಮಾತ್ರ ಇನ್ನೂ ‘ಸೂಳೆ ಕಾನೂನು’ ಜಾರಿಗೆ ತಂದಿತ್ತಿಲ್ಲ ಎಂದೊಬ್ಬರು ಪತ್ರ ಬರೆದಿದ್ದಾರೆ.

* * *

ಸರ್ ಸಿ. ಪಿ. ಅಮೆರಿಕಾಕ್ಕೆ ಪಾಠ ಹೇಳಿಕೊಡಲು ಹೊರಡುವರಿದ್ದಾರೆ.

—ಅಮೆರಿಕಾದಲ್ಲಿ ಸ್ತ್ರೀ ಪುರುಷರಿಗೆ ಸಮಾನ ಹಕ್ಕುಗಳು—ಪಕ್ಕ ಪಕ್ಕದ ಪತ್ರಿಕೆಯ ಸುದ್ದಿ—ಅಂದರೆ ತಿರುವಾಂಕೂರಿನಲ್ಲಿ ಅಸಮಾನ ಹಕ್ಕುಗಳಿದ್ದುವು ಅಂತಲೇ ಅರ್ಥ!

* * *

ಚೆಂಡಾಟ ಆಡಬೇಕಾದರೆ, ೧೧ ಜನರ ಎರಡು ಪಕ್ಷಗಳಿರಬೇಕು. (ಲೇಖನ)

—ಹೌದು-ತಾಂಡನ್ ಪಕ್ಷ-ನೆಹ್ರೂ ಪಕ್ಷ ಅಂತ-ಆಗಲೇ ಆಟ ಚೆಂದ!

* * *

ಪ್ರದರ್ಶನಕಾರ ದೊಂಬಿಯಮೇಲೆ ಅಶ್ರುಕಾರಕ ಬಾಂಬ್ ಪ್ರಯೋಗ (ಪತ್ರಿಕೆ)

—ಕಣ್ಣೀರಿಡುತ್ತಿದ್ದವರೇ ದೊಂಬಿ ಸೇರಿದ್ದರು ಅಂದಮೇಲೆ ಅಶ್ರುಕಾರಕ ಬಾಂಬು ವ್ಯರ್ಥವಲ್ಲವೇ?

---

# ಮೇಸ್ತ್ರಿಯ ಹೊಸಾ ಮೆಷಿನ್

---

ರಸ್ತೇಲಿ ಟಾರ್ ಹಾಕೋ ಮೆಷಿನ್ ಇದೆಯಲ್ಲಾ, ಅಂಥಾ ಹೊಸಾ ನವೀನ ಮಿಷಿನ್ ಒಂದನ್ನು ನಮ್ಮ ಮುನಿಸಿಪಾಲ್ಟಿ ಕೊಂಡುಕೊಂಡಾಗ, ಸಬ್ ಓವರ್ಸಿ ಸಾಹೇಬರು ನನ್ನ ಕರೆದರು. "ಮೇಸ್ತ್ರಿ! ನೀನೇ ಇದನ್ನು ಮೊದಲು ಉಪಯೋಗಿಸಬೇಕು. ಇದರ ಜವಾಬ್ದಾರಿ ನಿಂದೇ ಅಂತ ಹೇಳಿ ಆ ಮೆಷಿನ್‌ನ ನನ್ನ ಕೈಲಿಟ್ಟು ಧಾರೆ ಎರೆದರು. ನಾನೂ ಅದನ್ನ ಪ್ರೀತಿಯಿಂದ ಸ್ವೀಕರಿಸಿ, ವೈದಡವಿ, ಒಳ್ಳೆ ಮಾತಾಡಿ ಮುನ್ಸಿಪಾಲ್ಟಿ ಉಗ್ರಾಣದಲ್ಲಿಟ್ಟು ಭದ್ರವಾಗಿ ಬೀಗ ಹಾಕಿದೆ.

ಶನಿವಾರ ಅದನ್ನ ನಾನು ಮೊದಲು ಉಪಯೋಗಿಸಬೇಕು ಅಂತ ಹುಕುಂ ಆಗಿತ್ತು. ಬಲಗಾಲು ಮುಂದಿಟ್ಟುಕೊಂಡು ಹೋಗಿ, ಹಸಿರು ಪಾಗು ಸುತ್ತಿಕೊಂಡು ಹೋಗಿ, ಕೆಂಪು ಚಪ್ಪಲಿ ಗಿರ್ರ್ಯಾಯಿಸುತ್ತಾ ಹೋಗಿ, ಉಗ್ರಾಣದ ಬಾಗಿಲನ್ನ ಶುಭ ಮುಹೂರ್ತದಲ್ಲಿ ತೆಗೆದು, ಆ ಮೆಷಿನ್ನಿನ ಕೈಹಿಡಿದು ಹೊರಕ್ಕೆ ಕರೆದುಕೊಂಡು ಬಂದೆ, ಒಳ್ಳೆ ಮೇಷ ಲಗ್ನದಲ್ಲಿ.

ರಿಪೇರಿ ರಸ್ತೆ ಹತ್ತಿರ ಬರೋ ತನಕ ಮೆಷಿನ್ ಸಾಧುವಾದ ಹಸುವಿನಂತೆಯೇ ಇತ್ತು. ಅಲ್ಲಿ ಅದಕ್ಕೆ ಇಡಿಗಾಯಿ ಮಡಗಿ, ಎಣ್ಣೆ ಬೆಣ್ಣೆ ಹಚ್ಚಿ ಹೊಟ್ಟೆಗೆ ಟಾರ್ ಹಾಕಿ ತಳಕ್ಕೆ ಬೆಚ್ಚಗೆ ಮಾಡಿ, ಇನ್ನೇನು ರಸ್ತೆಗೆ ಟಾರ್ ಹಾಕಬೇಕು ಅನ್ನೋ ಘಳಿಗೆಗೆ, ಅದು ವಕ್ರವಕ್ರವಾಗಿ ಏನೇನೋ ಶಬ್ದ ಮಾಡುತ್ತಾ ಕಟಕಟ ಪಟ ಛಟ ಅಂತು. ತಳದ ಬೆಂಕಿ ಆರಿಹೋಯ್ತು. ಟಾರು ಹೆಪ್ಪುಗಟ್ಟಿ ಹೊರಕ್ಕೆ ಬರಲೇ ಇಲ್ಲ. ಎಲ ಎಲಾ! ಈ ಮಿಷೀನ್‌ಗಳಿಗೂ ಹಿಸ್ಟೀರಿಯಾ ಬರುತ್ತದೆಯಾ? ಬಂದರೆ ಏನಲಾ ಮಾಡಬಹುದು ಎಂದು ಮೂಗಿನಮೇಲೆ ಬೆರಳಿಟ್ಟುಕೊಂಡೆ.

ಅಷ್ಟುಹೊತ್ತಿಗೆ ಹತ್ತು ಹದಿನೈದು ಜನ ಡಾಂಗರು, ಧಾಂಡಿಗರು ಸುತ್ತಲೂ ನಿಂತಿದ್ದರು. ಪ್ರೇಕ್ಷಕರಿರೋಹಾಗ ನಾವು ಲಕ್ಷಣವಾಗಿರಬೇಕು ಅಂತ ಪಾಗು ಸರಿಮಾಡಿಕೊಂಡೆ. ಚಪ್ಪಲಿ ಗಿರಕ್ ಎನ್ನುವಂತೆ ಮಾಡಿದೆ.

ಎದೆ ಜಾಚಿ ಮುಖ ಒರೆಸಿಕೊಂಡೆ, ಯಾಕೇನೂ ಹಾಗೇ ಸರಿಮಾಡುತ್ತಾ, ಇನ್ನೇನು, ಮಿಷಿನ್ನಿನ ಹತ್ತಿರ ಹೋಗಿ ತಿರಿಗಿ ಬೆಂಕಿ ಹಾಕೋಣ ಅಂತಿದ್ದೆ.

ಅಷ್ಟರಲ್ಲಿ ಧಾಂಡಿಗ ಒಬ್ಬ ಸಲಹೆ ಕೊಟ್ಟ. "ಹೊಸಾ ಹೆಂಡತಿ ಅಡಿದ ಹಾಗೆ ಆಡುತ್ತೆ ಆ ಮಿಷನ್ನು, ಕಾಲಿನ ಕೆರ ಕೈಗೆ ತೆಗೊಂಡು. ಎರಡು ಮಡುಗು ಬಾಯ್‌ಲರ್ ಮೇಲೆ. ಆಮೇಲೆ ಸರಿಯಾಗಿ ಕೆಲಸ ಮಾಡುತ್ತೆ. ನಮ್ಮ ಇದ್ದಿಲ ಬಸ್ಸೂ ಹಿಂಗೇ ಮಾಡಿದಾಗ, ನಾನೂ ಹಂಗೆ ಮಾಡ್ತೇನೆ. ಬೂದಿ ಬೂದಿಯೆಲ್ಲಾ ಕೆಳಗೆ ಬಿದ್ದು ಕೆಲಸ ಸಾಫ್ ಅಗ್ತದೆ. ಇನ್ನೇನು ಚಪ್ಪಲಿ ಕಳಚಿಕೊಳ್ಳೋಣ ಅಂತ ಸೊಂಟ ಬಗ್ಗಿಸಿದೆ.

ಇನ್ನೊಬ್ಬ ಧಾಂಡಿಗ ಧನಿ ಎತ್ತಿ ಹೇಳಿದ. 'ವಯ್ಯಾ ಹಂಗೆ ಮಾಡ ಬೇಡ ಹಿಂದಿನ ಕಾಲದ ಹೆಂಡರಿಗೆ ಪೂಜೆ ಹಾಕಿಸಿದ ಹಾಗೆ ಇದಕ್ಕೆ ಪೂಜೆ ಮಾಡಿದರೆ ಒಳಗೆ ಕೀಲೇ ಮುರಿದುಹೋಗುತ್ತೆ. ಇದೆಲ್ಲಾ ಯುದ್ಧಾನಂತರದ ಮೆಷೀನ್‌ಗಳು. ಈಗಿನ ಹೆಂಡಿರಂತೆಯೇ. ಇದನ್ನ ಒಳ್ಳೆ ಮಾತಾಡಿ ಬಚಾಯಿಸಿಕೋಬೇಕೇ ಹೊರ್ತು ಜೋರು ಗೀರು ಮಾಡಿದರೆ, ಮೊಂಡಾಟ ಹಾಕಿ ಮನೇನೆ ಹಾಳುಮಾಡಿಬಿಡುತ್ತವೆ.

ಇನ್ನೂ ಸ್ವಲ್ಪ ಎಣ್ಣೆ ಹಚ್ಚು, ಬೆಣ್ಣೆ ತೀಡು. ಬೆಂಕಿಹಾಕಿ ಕಾಲೂರಿ ಕುಳಿತು ಊದೋ ಕೊಳವಿ ಹಿಡಿದು, ಊದು. ಬೆಂಕಿ ಚೆನ್ನಾಗಿ ಹತ್ತಿದರೆ ಕಿಡಿಕಿಡಿಯಾದಾಗ ಮೆಷಿನ್ ಕೆಲಸ ಮಾಡೋದೇ ಚಂದ. ನೋಡೋದು ಇನ್ನೂ ಚಂದ ಅಂತ.

ಅದೂ ನ್ಯಾಯವೇ ಅನ್ನಿಸಿತು ಈಗಿನ ಕಾಲದ ಅಂದರೆ ಯುದ್ಧಾನಂತರ ಹುಡುಗಿಯರ ಹಿಸ್ಟಿರಿಯಾಗೆ ದೊಣ್ಣೆ ಮದ್ದು ಏನೂ ಪ್ರಯೋಜನವಿಲ್ಲ. ಒಳ್ಳೇ ಮಾತು ಆಡಿ ಕೆಂಪೇರಿಸಿದರೇ ಸರಿ ಅಂತ ಹಾಗೆ ಮಾಡೋಣ ಅಂತ ಆ ಬಾಯ್‌ಲರ್ ಬಾಯಿನ ಹತ್ತಿರ ಪೂಜೇಗೆ ಕೂತಹಾಗೆ ಕೂತೆ. ಉಫ್ ಉಫ್ ಅಂತ ಊದೋಣ ಅಂತ.

ಆಗ ಇನ್ನೊಬ್ಬ ಧಾಂಡಿಗ ಇನ್ನೊಂದು ಹೇಳಿದ. 'ಅಯ್ಯೋ! ಮೇಸ್ತ್ರಿ ಹಲ್ಲು ಉದುರಿಸಬೇಕಾದರೆ ಎಲ್ಲೋ ಹೊಡೆದರೆ ಏನು ಪ್ರಯೋಜನ. ಟಾರ್ ಬರೋ ಕಡೆ, ಸಣ್ಣ ಚಿಮಣಿ ಇದೆಯೆಲ್ಲಾ! ಅದನ್ನ 'ಕಿಲೀನ್' ಮಾಡಿದರೆ, ಮೇಲೆ ಹೊಗೆ ಹೋಗುತ್ತೆ. ಬೆಂಕಿ ತಾನೇ ಹತ್ತಿಕೊಳ್ಳುತ್ತೆ. ಇದನ್ನ ಬಿಟ್ಟು ಅದರ ಹತ್ತಿರ ನಮಾಜ್ ಮಾಡೋನ ಹಾಗೆ ನೀನು ಕುಂತರೆ ಅದೇನು ಜಪ್ಪಯ್ಯಾ! ಅಂದೀತಾ ಅದೇನು ಮನುಷ್ಯನಾ ತಾನಾಗಿ ತಾನೇ ಹೊಗೆ ಬಿಡೋಕೆ. ಅಂದ.

ದಿಟ ದಿಟ ಆ ಸಣ್ಣ ಚಿಮಣೀನ 'ಕಿಲೀನ್' ಮಾಡೋದೇ ಸರಿ ಅಂತ ಹತ್ತಿರ ಇದ್ದ ಹೊಂಗೆ ಕಡ್ಡೀಗೆ, ಹಳೀ ಬಟ್ಟೆ ಕಟ್ಟಿ ಕಿಲೀನ್ ಮಾಡೋಣ ಅಂತ ಹೊಸಾ ಚಿಮಣಿ ಒಳಕ್ಕೆ ನೂಕಿದೆ. ಸುಲಭವಾಗಿ ಹೋಯಿತು. ಆದರೆ ಹಿಂದಕ್ಕೆ ಸೆಳೆದಾಗ ಬರೀ ಕಡ್ಡಿ ಹೊರಕ್ಕೆಬಂತು. ಅದರ ಮೇಲೆ ಬಗ್ಗಿ ಕಣ್ಣಿಟ್ಟು ನೋಡಿದೆ. ಹಳೇ ಬಟ್ಟೆ ಚೂರು ಆ ಗಾಡಾಂಧಕಾರದಲ್ಲಿ ಎಲ್ಲೂ ಕಾಣಿಸಲಿಲ್ಲ. ಆದರೆ ಕಣ್ಣಿಕ್ಕಿ ನೋಡಿದುದರ ಫಲವಾಗಿ ಎಡಗಣ್ಣು ಸುತ್ತಲೂ ಉರಿಯುಕ್ಕೆ ಶುರುವಾಯಿತು.

ಆ ವೇಳೆಗೆ ಸಬ್ ಓವರ್ಸಿ ಸಾಹೇಬರ ಸವಾರಿ ಬಂತು ನಮ್ಮ ರಸ್ತೇಗೆ. "ಎಲ್ಲಾ ಸರಿಯಾಗಿದೆಯಾ ಮೇಸ್ತ್ರಿ! ಯಾಕೆ ಇನ್ನೂ ಕೆಲಸ ಶುರು ಮಾಡಲಿಲ್ಲವೆ ಎಂಟಕ್ಕೇ ಶುರು ಮಾಡು ಅಂದಿದ್ದೆನಲ್ಲಾ. ಈಗಾಗಲೇ ಹನ್ನೊಂದು ಇನ್ನೂ ಯಾಕೆ ತಡ. ಓಹೋ! ಮೊದಲ ದಿವಸ. ನಾನು ಬರಲಿ ಅಂತ ಕಾದಿದ್ದೆಯಾ? ಭೇಷ್ ಅದೂ ನ್ಯಾಯವೇ? ಸರಿ ಈಗ ಬಂದೆನಲ್ಲಾ ಶುರು ಹಚ್ಚು" ಅಂತ ಅವರ ಪಾಡಿಗೆ ಅವರೇ ಎಲ್ಲಾ ಮಾತೂ ಆಡಿಬಿಟ್ಟರು.

ಇವರಿಗೆ ಹೇಗಪ್ಪಾ ಹೇಳೋದು ಮೂರು ಗಂಟೆಯಿಂದ ಒದ್ದಾಡಿದರೂ ಇದೇನು ಜಗ್ಗಲಿಲ್ಲ ಅಂತ. ಅಷ್ಟು ಖುಷಿ ಮೇಲಿದಾರೆ. ತಮಗೋಸ್ಕರ ಕಾದಿದೇವಿ ಅಂತ ಅಂದುಕೊಂಡಿದ್ದಾರೆ. ಇವರನ್ನೇ ಈ ಕಷ್ಟಕ್ಕೆ ಏನುಮಾಡೋದು ಸಾರ್ ಅಂತ ನಾನು ಕೇಳೋಣ ಅಂದರೆ, ದಿನಾಲೂ ಇಂತಹ ಮಿಷಿನ್‌ಗಳ ಜತೆ ಕೆಲಸಮಾಡೋ ನನಗೆ ಇದು ಅರ್ಥವಾಗದೇ ಇರೋವಾಗ, ಬರೀ "ಬಿಲ್"ನಲ್ಲಿ ಈ ಮಿಷಿನ್ ಕಂಡ ಈತ ಏನುತಾನೇ ಮಾಡಬಲ್ಲ ಅನ್ನಿಸುತ್ತೆ. ಹೇಗಪ್ಪಾ! ಬಚಾವಾಗೋದು ಅಂತಿದ್ದೆ.

ಅಷ್ಟುಹೊತ್ತಿಗೆ ಚಿಕ್ಕಸಾಹೇಬರೇ ದೊಡ್ಡಗಾಡಿಯಲ್ಲಿ ಅಲ್ಲಿಗೆ ಬಂದರು. ಸಬ್ ಓವರ್ಸಿ ಸಾಹೇಬರು ನಿಮಿರಿ ನಿಂತರು. ನಾನು ದಿಗಿಲುಬಿದ್ದು ಅಡ್ಡ ಬಿದ್ದೆ.

"ಇದನ್ಯಾಕ್ರೀ ಇಲ್ಲಿಗೆ ತಂದಿರಿ? ರಸ್ತೇಗೇನು ಬಣ್ಣ ಬಳೀತೀರಾ? ಕಂಬಕ್ಕೆ ಬಣ್ಣ ಹೊಡೆಯೋ ಮಿಷೀನ್ ಇದು. ಇದನ್ಯಾಕ್ರೀ ಇಲ್ಲಿಗೆ ತಂದ್ರಿ" ಅಂದರು.

"ಇಲ್ಲಿಗೆ ತಂದಿಲ್ಲ ಸಾರ್, ಇಲ್ಲಿಂದ ಉಗ್ರಾಣಕ್ಕೆ ತೊಗೊಂಡು ಹೋಗ್ತಾ ಇದೀವಿ" ಎಂದು ನಾನು ಉಗ್ಗಿದೆ.

ಓಹೋ! ಹಾಗೋ! ಇವರಲ್ಲೇ ಟಾರು ಕೂಡ ಮಾಡಿಬಿಡ್ತೀರೇನೋ ಅಂತ ಅಂದುಕೊಂಡೆ ಅಂತ ಅವರ ಕುಶಲ ಹಾಸ್ಯಕ್ಕೆ ಅವರೇ ನಕ್ಕರು. ನಾವೂ ದನಿಗೂಡಿಸಿದೆವು.

ಅವರ ಗಾಡಿ ಆ ಕಡೆ ಹೋಯಿತು. ಸಬ್ ಓವರ್ಸಿಯರು, ತುಂಬಾ ಚೂಟಿ ಮೇಸ್ತ್ರಿ ನೀನು ಅಂತ ಈ ಕಡೆ ತಮ್ಮ ಗಾಡಿ ಬಿಟ್ಟರು. ಕೂಲಿಗಳ ಕೈಲಿ ಐಸಾ, ಖಾರದ ಪುಡಿ ಐಸಾ, ಚಕ್ಕುಲಿ ಪುಡಿ ಐಸಾ, ಮೆಂತ್ಯದ ಹಿಟ್ಟು ಐಸಾ, ತೊಗರೀ ನುಚ್ಚು ಐಸಾ, ಗೋಕುಲಾಷ್ಟಮಿ ಐಸಾ, ಅಂತ ಸಾಮೂಹಿಕ ಸಂಗೀತ ಹೇಳಿಸುತ್ತಾ ಆ ಸಂಗೀತಕ್ಕೆ ಸರಿಯಾಗಿ ಕಾಲು ಹಾಕುತ್ತಾ, ಉಗ್ರಾಣ ಸೇರಿದೆವು.

— ಮೇಸ್ತ್ರಿ.

---




ಓ, ಅದೇ? ಮೊನ್ನೆ ರೇಷನ್ ಅಕ್ಕೀಲಿ ಸಿಕ್ಕ ಕಲ್ಲಿರಬಹುದು!

# ತಿರ್ ಮಂತ್ರ

ಯಾಂಡಲ್ ಇಂಗ್ ಇಡಿಕ್ಕ !
ಶೀಟ್ ವ್ಯಾಗ ಮಡಿಕ್ಕ ! ॥ ೧ ॥

ಐ........
ನಾಚ್ಕ್ಯಾಕೆ ಮಲ್ಲಿ ?
ಯಾರಿ ಔಪ್ರಿಲ್ಲಿ ?
ತಿಂಗಳ್ ಇದ್ರೇನೇ? ಸುತ್ತೆಲ್ಲ ಮಬ್ಬು !
ಬೇಕಾರೆ ನೀ ನನ್ನ ಯಿಂಗೆ ಇಲ್ಲ್ ತಬ್ಬು—
ಪತ್ತೆನ್ ಆಗೊಲ್ಲ !
ನೋಡೋರ್ ಯಾರಿಲ್ಲ ! ॥ ೨ ॥

ಇಂಗ್ ಕುಂತರ್ ಎಂಗೆ? ನಾ ಕಲಿಸಿಕೊಡಕ್ ಉಂಟ?
ಯಾಕೆ ಪಿರಕೀ? ನಿಂಗೆ ಸಡಿಲನಾ ಸೊಂಟ?
ನಂಬು—ನಿನ ಪಕದಾಗ ನಾನ್ ಇರೋಗಂಟ—
ವಿಶಾಸೆ ವ್ಯಾಗ್ ಇಂಗ್ ಕೈಯಿ! ಬೈಸಿಕಲು ಬಂಟ! ॥ ೩ ॥

ಅಕ್ಕಳಿಸು–ಎಳಿ–ಎಳಕೊ–ವೊಟ್ಟೀ–ವೊಳೀಕೆ !
ಮುಂಬಾರ ! ಐ ! ಅಸ್ಟು ಬಗ್ಬ್ಯಾಡ್ ಕೆಳೀಕೆ !
ಆ ! ಅಂಗೆ! ಕುದುರೆ ವ್ಯಾಗ್ ಶಿಪ್ಪಾಯ್ ಕುಂತಂಗೆ !
ನಡದಿಂದ ವ್ಯಾಗೆ ವೈಯಿರಬೇಕ್ ನಿಂತಂಗೆ ! ॥ ೪ ॥

ಇಲ್ಲಿ ಈ ಕಾಲ್ ಇತ್ತ—ಈ ಪ್ಯಡಲ ವ್ಯಾಗ್ ಆಕು ;
ಅಲ್ಲಿ ಆ ಕಾಲ್–ತತ್ತ–ಆ ಪ್ಯಡಲ ತುಳಿ, ನೂಕು ;
ಇದು ಬಿರೇಕ್—ಮುಟ್ಟಬ್ಯಾಡ್ ಇದನ !
ಮುಟ್ಟಿದರೆ—ಯಿಕ್ತೈತೆ ಮೊಕ್ಕೆ ಮೂರ್ ಒದೆನ ! ॥ ೫ ॥




ವಾಲ್‌ಬ್ಯಾಡ ಅಂಗೆ ಸನವ್ಯಾಗೆ !
ಅದಕೆಲ್ಲ ವೊತ್ತು—ಇಳಿದ ಆ ವ್ಯಾಗೆ ! ॥ ೬ ॥

ಕುಂತೀಯ ಬದ್ರ ?
ಕೈಯ ಬಿಡಲೀಯ ?
ಬೀಳೊವಂಗಾದ್ರೆ—
ಇಲ್ಲೀನ್ನಿ ಸಾಯ ! ॥ ೭ ॥

ಛೀ………
ಬಿಡಲೀಯ ? ಬಿಡತೀನಿ !
ಇದೊ— ಬಿಟ್ಟೆ ! ಬಿಟ್ಟೆ !!

ಎಲಾ ಮಲ್ಲಿ………
ಏಸೆ ನೀನ್ ಯಿಂಗ್ ಓಗ್ತಿ—
ಓಗುವಂಗ್ ಚಿಟ್ಟೆ ! ॥ ೮ ॥



ದುಂಬಿ ವೋದಂಗ್ ಓಗ್ತಿ !
ಕಂಬ ಸುತ್ತ್ದಂಗ್ ಸುತ್ತಿ !
ಪ್ಯಡಲ ತುಳಿತುಳಿತಿ ! ಸರ್ಕಸೇ ಮಾಡತಿ !
ಯಾಂಡಲೇ ಕೈ ಬಿಡ್ತಿ !
ಆಚೇಚಿಗ್ ಯಿಂಗ್ ಆಡ್ತಿ !
ಕೈಯ ಕೊಟ್ಟಿಲ್ಲಪ್ಪೋ ನಂಗೆ ನನ್ ಯಿಡ್ತಿ ! ‖ ೯ ‖

— ೨ —

"ಸೈಕಲ್ಲ ಮಾರಾಯ್ತಿ, ಕಲಿಸಿದೋರ್ ಯಾರೇ
ನಿನಗೆ, ನನ ಗರತಿ ?"
"ಪ್ಯಾಟಿ ಅಣದೀರೆಲ್ಲ ಪಾಟ ಯೇಳಾರೆ—
ನಂಗಿಲ್ಲಿ ನೂರಾರು ಸರತಿ !" ‖ ೧೦ ‖

"ಮತ್ತೇನೆ ಮಡಗೀದಿ—ಬರತನಾಟ್ಯ ?
ಚಿಂತಿಲ್ಲ—ಯೋಳು ರಾಸ್ಯ."
"ಯೋಳೋವ ಕೇಳೋವ ಸಮಯ ಬತ್ತೈತೆ—
ಈಗ ಸಾಕೇಳಿ ಆಸ್ಯ." ‖ ೧೧ ‖

"ಬತ್ತೀರ ಒಂದು ಕೈ ? ಡಬ್ಬುಲ್ ಸವಾರಿ ?
ಬಾರ್‌ಮ್ಯಾಗೆ ? ಊಂರೀ ! ನಿಜಾ-ರೀ !"
"ಸದ್ಯ ಕಪ್ಲಾಗ್ ಕಳದೆ ನನ್ನ ಮರುವಾದಿ—
ಬರದಿದ್ರೆ ಬಿಟ್ಟಯಾ ಬಜಾರೀ !" ‖ ೧೨ ‖




ಗಣೇಶ ಬಂದ

ರೇಷ್ಮೆ ಅಕ್ಕಿ ತಂದ

ಕಾಯಿ ಕಡುಬು ತಿಂದ

ಹಲ್ಲಲ್ ಕಲ್ಲ ಅಗಿದ

ಹಲ್ಲಲ್ ಕಲ್ಲ ಜಗಿದ

ಅಯ್ಯಯ್ಯೊ ! ಅಂದ !

ಚಿಕ್ಕಾಸ್ಪತ್ರೇಲಿ ಸೇರಿದ

ದೊಡ್ಡಾಸ್ಪತ್ರೇಲಿ ಮುಳುಗಿದ.

---

# ಬೀಟೀಸಿ

ಮಟಮಟ ಮಧ್ಯಾಹ್ನದ ಸಮಯ.

ಹಕ್ಕಿಗಳು ತಮ್ಮ ಕುಲಾಯಗಳಂ ಸೇರಿ ಚಿಲಿಪಿಲಿ ನಾದವಂ ಮಾಡುತಿವೆ. ವಾಯುಸಾದಿ ಪಕ್ಷಿಗಳು ತಮ್ಮ "ಕಾಕಾ" ನಿನಾದದಿಂದ ಎಲ್ಲರನ್ನೂ ಸಂತೋಷ ಗೊಳಿಸುತ್ತಿವೆ ಶುನಕಾದಿ ನೀಚ ವರ್ಗದ ಪ್ರಾಣಿಗಳು ಗೃಹಗಳ ಹಿಂಭಾಗ ವನ್ನು ಸೇರಿ ಉಚ್ಛಿಷ್ಟಾನ್ನವಂ ಭಕ್ಷಿಸುತ್ತಲಿವೆ. ಗೋವುಗಳು ತೃಣವನ್ನು ಭಕ್ಷಿಸಿ, ಆಯಾಸವಾಗಿ, ಕುಳಿತು ಮೆಲುಕು ಹಾಕುತ್ತಿವೆ. ಹೆಂಗಸರು ದೇವಾಲಯಗಳಿಂದ ಹಿಂದಿರುಗಿ ಬರುತ್ತಿದ್ದಾರೆ. ಮಕ್ಕಳೂ ಸಹ ಅವರ ಹಿಂದೆಯೇ ಧಾವಿಸಿ ಬರುತ್ತಿದ್ದಾರೆ. ಸೆಕ್ರೆಟೇರಿಯಟ್ ಕಾರಕೂನರು ತಮ್ಮ ದ್ವಿಚಕ್ರ ವಾಹನಗಳಮೇಲೆ ಕುಳಿತು ನಿಧಾನವಾಗಿ ಬರುತ್ತಿದ್ದಾರೆ.

ಹೀಗಿರುತ್ತಿರಲಾಗಿ, ದೂರದಲ್ಲಿ ಒಂದು ಘೋರವಾದ, ಭಯಂಕರವಾದ ಕರ್ಕಶ ನಿನಾದವು ಕೇಳಿ ಬಂತು. ಆ ಕರ್ಕಶ ನಿನಾದವು ಕ್ಷಣಕ್ಷಣಕ್ಕೂ ಹೆಚ್ಚಾಗ ತೊಡಗಿತು.

(ದಾರಿಯಲ್ಲಿದ್ದ) ಪ್ರಾಣಿಗಳೆಲ್ಲಾ ಬೆದರಿದವು. ಶುನಕಾದಿ ನೀಚವರ್ಗದ ಪ್ರಾಣಿಗಳು ಹಿಂಗಾಲಗಳ ನಡುವೆ ಪುಚ್ಛವಂ ಸೇರಿಸಿಕೊಂಡು ಧಾವಿಸ ತೊಡಗಿದವು. ನಿಧಾನವಾಗಿ ತೃಣವನ್ನು ಮೆಲುಕು ಹಾಕುತ್ತಿದ್ದ ಗೋವುಗಳು ಅಂಕುಶದಿಂದ ಚುಚ್ಚಲ್ಪಟ್ಟೋಪಾದಿಯಲ್ಲಿ ದೈನ್ಯದಿಂದ ಅರಚುತ್ತ ಪಲಾಯನ ಮಾಡಿದವು. ವಾಯುಸಾದಿ ಪಕ್ಷಿಗಳು ಮರದಲ್ಲಿದ್ದ ತಮ್ಮ ಕುಲಾಯಗಳಂ ತ್ಯಜಿಸಿ "ಕಾಕಾ, ಚಿಲಿಪಿಲಿ" ನಿನಾದವಂ ಮಾಡುತ್ತ ಬಹು ಮೇಲಕ್ಕೆ ಹಾರಿಹೋದವು. ಸರ್ಪಗಳು ತಮ್ಮ ವಲ್ಮೀಕವಂ ತ್ಯಜಿಸಿ ಸರಸರ ನಿನಾದ ಮಾಡುತ್ತ ದೂರ ಸರಿದುವು. ಹೆಂಗಸರು, ಮಕ್ಕಳು ತಮ್ಮ ಗೃಹಗಳಂ ಕುರಿತು ಧಾವಿಸಿ, ಒಳಗೆ ಪ್ರವೇಶಿಸಿ, ಬಾಗಿಲು ಹಾಕಿ, ವಾತಾಯನದಿಂದಿಣಿಕಿ ನೋಡ ತೊಡಗಿದರು. ಸೆಕ್ರೆಟೇರಿಯಟ್ ಕಾರಕೂನರು ತಮ್ಮ ದ್ವಿಚಕ್ರ ವಾಹನಗಳಂ ಹಿಂದಕ್ಕೆ ತಿರುಗಿಸಿದರು.

ಅಭಯಂಕರವಾದ ಕರ್ಕಶ ನಿನಾದವು ತೀರ ಹತ್ತಿರ ಸಮೀಪಿಸಿತು. ಅದೇನೆಂದು ಎಲ್ಲರೂ ತಿರುಗಿನೋಡಿದರು.

ಬೀಟೀಸಿ ಬಸ್ಸು ಬಂದಿತು.

—"ವಸು"

# ಸತ್ತು ಬದುಕಿದನಾತ

—

ಮೊದಲೆ ಶಾಲಾ ಮಾಸ್ತರ,
ಮೇಣ್ ಪತ್ತು ಮತ್ತೆರಡು ಪಸುಳೆಗಳ್ ।

ವದಲಿಸುವಾಮಡದಿ,
ಮೇಣ್ ಉಂಡು ಮಲಗುವ ಮಗಳ ಗಂಡ ।

ಮೈಸೇರಿದಾ ಮರಿಕಳಿಪ ಮಲೇರಿಯಾ,
ಮೇಣ್ ಥೂಕರಿಸಿ ಕುಕ್ಕುವ ಬಾಸು ।

ಇವು ಆರು ಮುತ್ತಿರಲು,
ಹತ್ತು ಕೈಲನು ತೊಲಗು ಕೊಪ್ಪಕೆ ಎನೆ ।

ಇದ್ದು ಸಾಯ್ವುದಕಿಂತ
ಸತ್ತು ಬದುಕಿಪ್ಪುದೆ ಲೇಸೆಂದ ಶಂಭುಲಿಂಗ ||

— ಯಜ್ಞಪಶು.





# ಬಚ್ಚನ ಪತ್ರ

—

ಶ್ರೀ। ಅಪ್ಪನವರಿಗೆ. ಬಚ್ಚನ ಶರಣಾರ್ತಿ.

ನನ್ನ ಹಿಂದಿನ ಕಾಗದಕ್ಕೆ ತಮ್ಮಿಂದ ಉತ್ತರ ಬರಲಿಲ್ಲ. ನೀವೆಲ್ಲರೂ ಆರೋಗ್ಯವಾಗಿದ್ದೀರಿ ಎಂದು ನಂಬಿದ್ದೇನೆ. ಇಲ್ಲಿ ಸ್ವಲ್ಪ ಮಳೆಬಿದ್ದು ಹವಾ ಚೆನ್ನಾಗಿದೆ ಸಾಯಂಕಾಲದ ಹೊತ್ತು ಬಲು ರಮ್ಯವಾಗಿದೆ.

ಈ ತಿಂಗಳ ಖರ್ಚಿಗೋಸ್ತರ ೫೦ ರೂಪಾಯಿ ಕಳಿಸಿಕೊಡೋದು.

ಇತಿ ನಿಮ್ಮ ಪುತ್ರ,

ಬಚ್ಚ.

* * *

ಚಿ॥ ಬಚ್ಚನಿಗೆ ಆಶೀರ್ವಾದಗಳು. ನಿನ್ನ ಕಾಗದ ಬಂತು ಇಲ್ಲಿ ಎಲ್ಲರೂ ಕ್ಷೇಮ. ನಿಮ್ಮಮ್ಮ ನಿನಗೆ ಕಾಗದ ಬರೆದಿದ್ದದ್ದರಿಂದ ನಾನು ಬರೆಯಲಿಲ್ಲ. ಈ ದಿನ ಮನಿಆರ್ಡರ್ ಮಾಡಿದ್ದೇನೆ. ಕಾಲೇಜ್ ಸೇರುಕ್ಕೆ ಅಂತ ನೀನು ಹೋಗಿ ನಾಲ್ಕು ತಿಂಗಳಾಯಿತು. ತಿಂಗಳು ತಿಂಗಳೂ ಹವಾ ಚೆನ್ನ. ಸಾಯಂಕಾಲ ಸೊಗಸು. ಮಂಜು ಎದ್ದಿತು, ಮಳೆ ಬಿತ್ತು. ಮೋಡ ಹಾರಿತು, ಗುಡುಗು ಬಡಿಯಿತು ಅಂತ ಬರೆಯುತ್ತೀಯೋ ಹೊರತು, ನಿನ್ನ ಕಾಲೇಜು, ನಿನ್ನ ವ್ಯಾಸಂಗ, ನಿನ್ನ ಮಾಸ್ತರುಗಳು ನಿಮ್ಮ ಪುಸ್ತಕಗಳು ಈ ವಿಚಾರ ಏನೊಂದು ಬರೆದಿಲ್ಲ. ಮುಂದಿನ ಕಾಗದದಲ್ಲಿ ಅವುಗಳ ವಿಷಯ ತಪಶೀಲಾಗಿ ಬರಿ.

ನಿನ್ನ ದೇಹಸ್ಥಿತಿ ಹುಷಾರಾಗಿ ನೋಡಿಕೋ!

ನಿನ್ನ ಪಿತೃ,

ಶಿಂಗ್ರೈಯ್ಯ.

* * *

ಶ್ರೀ. ಅಪ್ಪನವರಿಗೆ. ಬಚ್ಚನ ಶರಣಾರ್ತಿ.

ನೀವು ಕಳಿಸಿದ ಮನಿಆರ್ಡರ್, ಮತ್ತು ಕಾಗದ ಸಂದಿತು, ದಿಟ. ನೀವು ಹೇಳಿದಂತೆ ಕಾಲೇಜು ಸೇರಲು ಬಂದು ನಾಲ್ಕು ತಿಂಗಳಾದುವು. ಆದರೆ, ದಿನಾಲೂ ಕಾಲೇಜಿಗೇನೋ ಹೋಗುತ್ತಿದ್ದೇನೆ. ನನ್ನಂತೆಯೇ ಬಂದಿರುವ

ಹುಡುಗರ ಜತೆಯಲ್ಲಿ ಯಾವ ತರಗತಿಯಲ್ಲಿ 'ಸೀಟು' ಕೊಟ್ಟಿದ್ದಾರೆ? ಯಾವಾಗ ಕೊಡುತ್ತಾರೆ? ಅಂತ ನಾಲ್ಕು ತಿಂಗಳಿಂದಲೂ ಕಾಲೇಜ್ ನೌಕರರನ್ನು ಕೇಳುತಿದೇನೆ. ಇವತ್ತು ಅವತ್ತು ಇಗೋ ಆಗೋ ಅಂತ ಆತ ಹೇಳಿದ್ದು ಕೇಳಿ ಹೊರಗೆ ಬಂದು ಮರದ ಕೆಳಗೆ ಪರಶೆ ಸೇರುತ್ತೇವೆ. ಅದಕ್ಕೆ ಹವಾ, ಮೋಡ ಆಕಾಶ ಗುಡುಗು ಇವುಗಳ ವಿಷಯವಾಗಿಯೇ ಹೆಚ್ಚು ಕಾಗದದಲ್ಲಿ ಬರೆದಿರುತ್ತೇನೆ.

ಕಾಲೇಜಲ್ಲಿ ಯಾವ ತರಗತಿಗೆ ಸೇರಿಸುತ್ತಾರೆ ಎನ್ನುವುದು ಇನ್ನೂ ತಿಳಿದಿಲ್ಲ. ಅಂದಮೇಲೆ ಯಾವ ಪುಸ್ತಕಗಳು ಬೇಕು ಅನ್ನುವುದೂ ತಿಳಿದಿಲ್ಲ ಮಾಸ್ತರುಗಳ ಮುಖವನ್ನೇ ಕಂಡಿಲ್ಲ. ಈ ಕಾಲೇಜ್ ಆವರಣದಲ್ಲಿ, ಹುಡುಗರೇ ಮಾಸ್ತರ ಹಾಗೂ, ಮಾಸ್ತರುಗಳೇ ಹುಡುಗರ ಹಾಗೂ ಕಾಣಿಸುತ್ತಾರೆ ಎಂದು ಇಲ್ಲಿ ಪ್ರತೀತಿ.

ನಿನ್ನೆ ನಮ್ಮೂರಿನ ಜಗ್ಗು ಸಿಕ್ಕಿದ. ಅವನನ್ನು ಕೇಳಿದೆ. ನಾಲ್ಕು ತಿಂಗಳು ಆಗಿಹೋಯ್ತು. ನಮಗೆ ಸೀಟ್ ವ್ಯವಸ್ಥೆ ಮಾಡಿ ಸೇರಿಸಿಕೊಳ್ಳೋ ಹೊತ್ತಿಗೆ ದಸರಾ ರಜಾ ಬಂದುಬಿಡುತ್ತೆ. ಆಮೇಲೆ ಕ್ರಿಸ್‌ಮಸ್ ಆಮೇಲೆ ಪರೀಕ್ಷೆ. ಪಾಠ ಏನು ಸಾಗುತ್ತೋ. ನಾವೇನು ಕಲಿತು ಪರೀಕ್ಷೇಲಿ ಒಪ್ಪಿಸೋದೋ! ನಪಾಸು ಖಂಡಿತ ಅಲ್ಲವೇ ಅಂದೆ.

ಜಗ್ಗು ಹೇಳಿದ 'ಅದೇ ಕಾರಣದಿಂದ ಎಲ್ಲರನ್ನು ಮೇಲಕ್ಕೆ ದಬ್ಬೀ ದಬ್ಬುತ್ತಾರೆ ಕಣೋ! ಮಾಸ್ತರುಗಳ ಸೌಕರ್ಯಕ್ಕೆ ಪರೀಕ್ಷೆ ಅಂತ ನಡೆಸುತ್ತಾರೆ. ವರ್ಷದ ಹೆಚ್ಚು ಖರ್ಚಿಗೆ ಒಂದು ದಾರಿ ಇರಲಿ ಅಂತ. ಆಮೇಲೆ ಏನಾದರೂ ಒಂದು ನೆಪ ಹೂಡಿ ಎಲ್ಲರನ್ನೂ ಮುಂದಕ್ಕೆ ಎತ್ತೀ ಎತ್ತುತ್ತಾರೆ. ನಪಾಸು ಅಂತ ಹೆದರ ಬೇಡ' ಅಂತ.

ಅಂದ ಮೇಲೆ ಈ ವರ್ಷ ನಾನು ಪಾಸಾದಹಾಗೆಯೇ ಅದರ ಕಾಳಜಿ ಮಾಡಬೇಡಿ.

ಮಾಸ್ತರುಗಳ ಭೇಟಿಯಾದಾಗ, ಅವರು ಪಠ್ಯ ಪುಸ್ತಕಗಳ ಪಟ್ಟಿ ಕೊಟ್ಟಾಗ ನಿಮಗೆ ಕಾಗದ ಬರೆಯುತ್ತೇನೆ.

ಮುಂದಿನ ತಿಂಗಳು ಮೂರು ಹೊಸಾ ಸಿನಿಮಾ ಬರುತ್ತಾದ್ದರಿಂದ, ಮಳೆ ಬರುವ ಕಾಲವಾದ್ದರಿಂದ, ಒಂದು ಮಳೆ ಅಂಗಿ ಕೊಳ್ಳಬೇಕಾದ್ದರಿಂದ. ೭೫ ರೂಪಾಯಿ ಕಳಿಸಿಕೊಡಿ.

ಇಲ್ಲಿ ನಾನು ಕ್ಷೇಮ. ನೀವೆಲ್ಲರೂ ಚೆನ್ನಾಗಿದ್ದೀರೆಂದು ನಂಬುತ್ತೇನೆ.

ನಿಮ್ಮ ಪುತ್ರ,

ಬಚ್ಚ.

# ನೀತಿಯ ಕತೆಗಳು (೨)

## (ಬಲಿತವರಿಗೆ)

ಡೋಬಿ ದಾನಯ್ಯನಿಗೆ ಜೀವನ ನಡೆಸೋದು ಕಷ್ಟವಾಯಿತಂತೆ. ಎಲ್ಲರೂ ಸೆಲ್ಫ್ ಸೆಲ್ಫ್ ಅಂತ ಹೋಗಿಬಿಟ್ಟರಂತೆ. ಇವನಿಗೆ ಗಿರಾಕೀನೆ ಇಲ್ಲದೆ, ಇದ್ದ ಕತ್ತೇನ ಮಾರೋಣ, ಒಂದು ತಿಂಗಳು ಅಂಬಲಿ ಕುಡಿಯಬಹುದು ಅಂತ ಕತ್ತೇನ ಮಾರುಕಟ್ಟೆಗೆ ಕರೆದುಕೊಂಡು ಹೋದನಂತೆ. ಮಧ್ಯಾಹ್ನ ೨-೩ ಗಂಟೆ ಹೊತ್ತಿನಲ್ಲಿ.

ಅಲ್ಲೊಬ್ಬ ಪಠಾಣ ಈ ಕತ್ತೇನನೋಡಿದನಂತೆ. "ಪರವಾಗಿಲ್ಲ ಈ ಕತ್ತೆ! ಸಾಕಷ್ಟು ರೇಷ್ಮೆ ಹೊತ್ತುಕೊಂಡು ಅರ್ಧದಾರೀಲಿ ಗಡಿ ದಾಟುಕ್ಕೆ ಸರಿಯಾಗಿದೆ" ಅಂತ ಅಂದುಕೊಂಡು, ದೋಭೀನ ಕೇಳಿದನಂತೆ. "ಎಷ್ಟಯ್ಯಾ! ಬೆಲೆ ಕತ್ತೇಗೆ" ಅಂತ. ದೋಭಿ ಯೋಚನೆಮಾಡಿ, ಪಠಾಣನ ವ್ಯಾಪಾರ, ಇರಲಿ ಅಂತ ಇಪ್ಪತ್ತೈದು ರೂಪಾಯಿ ಎಂದನಂತೆ. ಪಠಾಣ ಆಗತಾನೇ ಒಂದು ರೇಷ್ಮೆ ಗೂಡೇನ ಗಡಿ ಆಚೆ ಕಾಳಸಂತೇಲಿ ಮಾರಿ ಬಂದಿದ್ದನಂತೆ. ಇಜಾರದಿಂದ ಇಪ್ಪತ್ತೈದು ರೂಪಾಯಿ ತೆಗೆದು ದೋಭಿ ಕೈಲಿಟ್ಟು ಇನ್ನು ಕತ್ತೆ ನನ್ನದು ಅಂದ ನಂತೆ. ಹ್ಞೂ ಎಂದನಂತೆ ದಾನಯ್ಯ ಸಂತೋಷದಿಂದ ರೂಪಾಯಿಸುಕೊಂಡು.

ಬಿಸಿಲು ಜೋರಾಗಿತ್ತು ಅಂತ ಕತ್ತೆ ನೆರಳಲ್ಲಿ ದೋಭಿ ಕೂತು ಒಂದು ಬೀಡಿ ಹಚ್ಚಿದನಂತೆ. ಪಠಾಣ ಅಂದನಂತೆ, ನನ್ನ ಕತ್ತೆ ನೆರಳು ಇಲ್ಲಿ ಕೂಡ ಬೇಡ ಅಂತ. ದೋಭಿ ಅಂದನಂತೆ "ನಾನು ಕತ್ತೆ ಮಾರಿದ್ದು, ನೆರಳನ್ನಲ್ಲ" ಅಂತ. ಇಬ್ಬರೂ ಮಾತಿಗೆ ಮಾತು ಮಿಲಾಯಿಸಿ ಕುಸ್ತೀಗೆ ಶುರು ಮಾಡಿದರಂತೆ.

ಆಗ ಈಸೋಪ ಬಂದನಂತೆ. "ಎಲ್ಲೋ! ಹೀಗೆ ನೆರಳಿಗೆ ನೀವು ಗುದ್ದಾಡತ್ತಾ ಇದ್ದರೆ, ಕತ್ತೆ ಪಾಡಿಗೆ ಕತ್ತೆ ಓಡಿಹೋಗುತ್ತೆ ಇನ್ನೊಂದು ಕತ್ತೇ ಊರಿಗೆ. ಇಷ್ಟು ತಿಳಿಯುಲ್ಲವೇ? ಸತ್ಯವಾದ್ದನ್ನು ಬಿಟ್ಟು ಬರೀ ನೆರಳಿಗೆ ಕಾದಾಡಬಹುದೇ? ಎಂದು ಬುದ್ಧಿ ಹೇಳಿದನಂತೆ

ಆಗ ಪಠಾಣ ಅಂದನಂತೆ, "ಅಯ್ಯೋ! ಈಸಾಪ! ನಿನಗೆ ಇಷ್ಟು ಬುದ್ಧೀನೂ ಬೇಡವೇ! ಇಪ್ಪತ್ತೈದು ರೂಪಾಯಿ ಕೊಟ್ಟ ನಾನು ಅಷ್ಟು ಪೆಚ್ಚೆ. ಕತ್ತೆ ಕಾಲು ನೋಡು. ಎರಡೆರಡೂ ಕಾಲೂ ಕಟ್ಟಿಹಾಕಿದ್ದೇನೆ. ಅದೆಲ್ಲಿಗೆ ಓಡಿಹೋಗುತ್ತೆ. ಅದನ್ನು ಭದ್ರಮಾಡಿಕೊಂಡೇ ನೆರಳಿಗೆ ಗುದ್ದಾಡುತ್ತಿದ್ದೇನೆ" ಅಂತ

**ನೀತಿ:**—ನೀತಿ ಹೇಳುಕ್ಕೆ ಮುಂಚೆ ನಾವು ಹೆಂಡ್ತಿ ಬಿಟ್ಟಿದ್ದೇವೆಯೋ ಎಂದು ನೋಡಿಕೊಳ್ಳುವುದು ಒಳಿತು.

# ಓಲೆ-ಮರು ಓಲೆ

(ನಾಡಿಗೇರ್ ಗೋವಿಂದರಾವ್)

---

ಶ್ರೀ

ದಿನಾಂಕ........................

ಕುಶಲ                ಮೈಸೂರು

**ಬಾಳಗೆಳತಿ, ಬೆಡಗುಗಾತಿ, ಮುಗ್ಧಮನೋಹರ ಮೂರ್ತಿ, ಮಂಗಳಾಂಗಿ....**

ಚಾತಕ ಪಕ್ಷಿಯಂತೆ ನಿನ್ನ ಕಾಗದಕ್ಕೆ ಕಾತರಿಸಿ ಕಾದು ಕಾದು ಸಾಕಾಗಿ ಹೋಯಿತು. ಕೋಮಲಾಂಗಿ, ಎನ್ನ ಮೇಲೆ ಕೋಪವೇ. ಔದಾಸೀನ್ಯವೇ, ಅಲಕ್ಷ್ಯವೇ, ಹೇಳ್. ಸ್ನಿಗ್ಧಮಧುರ ಕಮಲದ ಹೂ ದುಂಬಿಯನ್ನು ಸೆರೆಗೈದಂತೆ ಎನ್ನ ಹೃದಯವನ್ನು ಸೆರೆಗೈದಿದ್ದೀಯೆ. ಮನೋಹರಿ, ಮನ್ಮಥನ ಹೂಬಾಣಗಳು ಎನ್ನ ಮನವನ್ನಿರಿಯುತ್ತಿವೆ. ಸದಾ ಎನಗೆ ನಿನ್ನ ಯೋಚನೆಯೆ.

ಫಣಿರಾಡ್ವೇಣಿ, ದುಂಬಿಯಂತೆ ಮುಂಗುರುಳುಳ್ಳ ಕುಸುಮ ಕೋಮಲೆ, ನಿನ್ನನ್ನು ಏನೆಂದು ಬಣ್ಣಿಸಲಿ? ನಿರ್ದಯಳಾಗದೆ ಕೂಡಲೆ ಓಲೆಯನ್ನು ಬರೆ. ಮರು ಟಪಾಲೇ ಎನ್ನ ಜೀವನ-ಮರಣದ ಪ್ರಶ್ನೆಯನ್ನು ನಿರ್ಧರಿಸುವುದು. ಎನ್ನ ಹೃದಯೇಶ್ವರೀ, ಕವನ ಬರೆಯುವಾಗ ನಿನ್ನ ಮಧುರ ಮೂರ್ತಿ ನನ್ನ ಮುಂದೆ ಬಂದಂತೆ ಭಾಸವಾಗುವುದು. ನಿನ್ನ ಬೊಗಸೆಗಣ್ಣುಗಳು ಮುಂದೆ ಬಂದಂತಾಗುವುದು. ಇನಿಯಳೆ, ಇನ್ನಾದರು ಕಾಗದಬರೆ. ಇಲ್ಲವಾದರೆ, ಹೊಳೆಯನ್ನು ಹಾರಿ ಪ್ರಾಣಬಿಡುವುದು ಖಂಡಿತ. ಎನ್ನ ಕವನಗಳನ್ನು ನಿನಗೆ ಶ್ರವಣ ಮಾಡಿಸಲು ನಾನು ಕಾದಿರುವೆನು. ನೀನು ಆನಂದತುಂದಿಲಳಾಗುವೆ ಎನ್ನ ಕಾವ್ಯಕ್ಕೆ ನೀನೇ, ದಿಟಂ ನೀನೇ, ಸ್ಫೂರ್ತಿದಾಯಿನಿ. ನಿನ್ನ ಸಂಪಿಗೆ ಮೂಗು, ಸುಳಿಗುರುಳು, ಸುಲಿಪಲ್ಲು, ಇವಕ್ಕೆ ನಾನು ಮರುಳಾಗಿದ್ದೇನೆ. ನಿನ್ನ ಕೇಶರಾಶಿಯನ್ನು ಮರ್ದಗಜ ದಂತದ ಬಾಚಣಿಗೆಯಿಂದ ನಾನೆಂದು ಬಾಚಲಿ?

ಬಾ ಎನ್ನ ಚನ್ನೆ, ಬಾ ಎನ್ನ ರನ್ನೆ. ಎಲ್ಲೈ ಸಿಂಹ ಸೊಂಟನಿಯೆ? ನೀನಿಲ್ಲದೆ ಎನಗೆ ಜಗತ್ತು ಶೂನ್ಯ. ದಿಂಡು ಕೈಯು, ದುಂಡು ಮೈಯ ಎನ್ನ ಹೆಂಡತಿ, ನೀನು ಈಗ ಸುಖವೋ? ನಿನ್ನಯ ಜನಕ ಜನನಿ ಅನುಜೆಯರು ಆರೋಗ್ಯವೋ? ನಾಳೆಯೆ, ತಾತ್ಸಾರಮಾಡದೆ, ನಿರ್ದಯಳಾಗದೆ, ಮರು ಓಲೆಯಂ ಲಿಖಿ.

ಇಂತು, ನಿನ್ನ ಪ್ರೇಮಾಗ್ನಿಯಲ್ಲಿ ದಹಿಸಿಹೋಗಿರುವ
ನಿನ್ನ ಮನೋವಲ್ಲಭ,
**ವಸಂತರಾವ್.**

**ಪತ್ರೋತ್ತರಲಿಖಿತ :—**

ವಸಂತನಿದ್ದಾನೆ; ಆದರೇನ್, ಕೋಗಿಲೆಯ ಕೂಗಿಲ್ಲ.
ಮಾಮರವಿದೆ; ಮಲ್ಲಿಕಾಲತೆ ಇಲ್ಲ.
ಇವೆರಡೂ ಸಂಗಮಿಸುವುದೆಂತು? ಪೇಳ್! ನೀಲೋತ್ಪಲ ನಯನೆ.

ಇಂತು,
ಕೋಗಿಲಾರಹಿತ, ಸಂತಸವಿಲ್ಲದ ವಸಂತ.

— ಶ್ರೀ —

ಪಿರಿಯರೆ, ನಮಸಾರ. ನಿಮ ಕಗದ ಬತ್ತು. ನಗ್ಗೆ ಅರ್ತ ಅಗಲಿಲ್ಲ. ಅಪಗೆ ತೊರಿಸಿದೆ. ಅಪ ಓದಿದರು. ಯರಿಗದರು ಸೀಕಿತು ತಪ್ಕಣ ಹಂದು ಹಾಕು ಬಂಕಿಗೆ ಅಂದರು. ನಮ ಅಮ ಖುಸು ಸುಕವಗಿಯಿದ್ದರೆ. ಇಲಿ ಪಾವ್ರತಮ ಸಂಗಾತ ಹೆಳಿಕೊಡುತರೆ. ಕಪಿ ಕಲರಿನ ಎರಡು ಪೊಂಡ್ ಊಲರ್ ಕಳಿಸಿ. ದುಡು ಕಳಿಸಿ. ಮಣ್ಣಿ ತೆಗೊಬೆಕ್ಕು. ನಾನು ಆನೆ ಹಾಕುತಿದೆನೆ. ಇಲಿ ಮಳೆ ಭಾಳ. ಭಾಸ್ ನಿತ್ತು ಬಿಟ್ಟದೆ. ನಮ ತಮಗೆ ಆಶಮಂಕೆ ಜಗಿದೆ. ನಗ್ಗ್ಗ ಮೈ ಚನಾಗಿಲ್ಲ. ಡಕಟರು ಬದ್ದಿದಂರು. ಅಮೀನಿಯಾ ಓಶಧಿ ಕೊಟ್ಟರು. ಎರಡು ಬಟ್ಲ್ಲ ಟನಿಕ್ಕು ಕಳಿಸಿ. ಬೇಲದ ಕಪಿ ಇಲಿ. ನೀವು ಸಂಕರೆ ಕಳಿಸಿ. ನನ್ನ ತಗ್ಗಿಗೂ ಬಾಚಣಿಕ್ಕೆ ಬೇಕತ್ತೆ, ನಗ್ಗೂ ಬೇಕು. ಟಪ್ಪಲಿಗೆ ಹಾಕಿ. ಅಪ ಹೇಳಿದರು. ಇಲಿಯೆಲ ಕ್ಷಾಮ. ನಿಮ ಕಗಾದ ಬರೆ ಇರಿ ಯಿನೇನು ಯಿಷ್ಟೇ ಷಯಿಲ.

ನಿಮ ಹೆಡ್ಡತಿ.
**ವಟಂಲಷ್ಕಮಿ, ಬಿ. ಕೆ.**

———★———

# ನೋ....ವೇ....?



"ಹಯ್ಯೋ ಡಾಕ್ಟ್ರೇ" ಸಂಕಟ ತಡೆಯಲಾರೆ...... ಅಬ್ ಬ್ ಬ್ಬಾ.......! ತಾಳಯ್ಯ ಸ್ವಲ್ಪ ಈ ಕೇಸನ್ನ ಮುಗಿಸಿಬಿಟ್ಟು ಬರುತ್ತೀನೆ ......ತಲೇಗೇನಯ್ಯಾ ಕಟ್ಟು.......? ಅದು ಬೇರೇ ವಿಷಯ ಡಾಕ್ಟ್ರೇ.......! ಬಂಡೀಪುರದ ರಸ್ತೆಯಲ್ಲಾದದ್ದು........ಬಸ್‌ನಲ್ಲಿ ಹೋಗುತ್ತಿದ್ದಾಗ "ಫಸ್ಟ್‌ಏಡ್" ಬಾಕ್ಸ್ ತಲೇ ಮೇಲೆ ಬಿದ್ದು ತೂತಾಗಿತ್ತು—ಅದೀಗ ವಾಸಿ......., ಈಗ......! "ಈಗೇನು!" ಹೊಟ್ಟೆ ಸಂಕಟ ಡಾಕ್ಟ್ರೇ........ಚಪಾತೀ ತಿಂದದ್ದರಿಂದ ಆಯಿತು........"ಯಾವ ಡಿಪೋ ಗೋಧಿ ......?" ಡಿಪೋದಲ್ಲೆಲ್ಲಿ ಬೆಳೆಯುತ್ತಾರೆ ಡಾಕ್ಟ್ರೇ.... ..! ಪಾಪ! ಸರ್ಕಾರ ಕೊಟ್ಟ ಕೋಟಾತಾನೇ ಅವರೂ ಮಾರಬೇಕು. ಆದರೂ....... ಬೇರೆ ಬೇರೆ ಕೊಡಬಹುದಾಗಿತ್ತು. "ಏನಯ್ಯ........ನಿನಗೆ ಬರೀ ಹೊಟ್ಟೇನೋವಲ್ಲಾ ........ಪಿತ್ತಾ ಕೂಡ ಏರ್ತಿದೆ.......!" ಬಂದೆ ಅದಕ್ಕೂ ಔಷಧಿ ಕೊಡ್ತೇನೆ. ಇಲ್ಲ ಡಾಕ್ಟ್ರೇ........ಬರೀ ಹೊಟ್ಟೇನೋವೇ........! ಬೆರಸಿಬಿಟ್ಟಿದ್ದರಿಂದ ಆಗಿದ್ದು .... . ಅಂದರೆ? ಅಮೇರಿಕಾ ಬಿಳೀ ಗೋಧಿ ...... ರಷ್ಯಾ ಕೆಂಪು ಗೋಧಿ ....... ಬೆರಸಿದ್ದು ಕೊಟ್ಬಿಟ್ರು ....... "ಸರಿ........" ಚಪಾತೀ ಮಾಡಿಯೂ ತಿಂದುಬಿಟ್ಟೆ ........ "ಸರಿ........" ಅದಕ್ಕೇನೀಗ ... .. ?

ಕಣ್ ಕಣ್ ಬಿಡ್ತೀರಲ್ಲಾ ಡಾಕ್ಟ್ರೇ........! ಹೊಟ್ಟೆಯಲ್ಲಿ "ಕೊರಿಯಾ ಕದನ" ಪ್ರಾರಂಭವಾಗಿಬಿಟ್ಟಿದೆ. ಯಾವುದೋ ಕರುಳನ್ನು ಹಿಡಿದು ಮೂವತ್ತೆಂಟನೇ ಗೆರೆಯಂತೆ ಗೋಳಾಡಿಸುತ್ತಿದೆ.. ....ಎರಡು ಗೋಧೀನೂ. ನಾನೇನ್ಮಾಡಲೀ........ಅದಕ್ಕೆ ನನ್ಹತ್ರ ಔಷಧಿ ಇಲ್ಲ. "ಯುನೋ"ಗೆ ಹೋಗು........ ಹಯ್ಯೋ! ಡಾಕ್ಟ್ರೇ ಅವರಂತೆ ನೀವೂ ಕೈಬಿಟ್ರಾ .......ಗತಿ,

—ಸಾರಥಿ.

---

ಚೋರ ಬಂದ ಬಿಹದಿಯಿಂದ ಬೆಂಗಳೂರಿಗೆ
ಬಂದ ಚೋರ ಸರಿದ ಹರಿವಲಾರಿಬಾಯಿಗೆ.

# ಭೂಪ್ತಿ

ಕೊಟ್ಕಾಸನ್ನ ಕೊಡವಾಂತಂದ್ರೆ
    ಹಲ್ಲುಲ್ ಕೀರಿತಾನೆ
ಕಾಸಿಲ್ಲಾ ಇಲ್ಲಾ ಅಂತ
    ಗೋಳ್ ಸುರಿಸ್ತಾನೆ

ಸಾಪ್ಪ ಕೊಡ್ರೋ ಗೆಣ್ಯಾ ಅಂತ
    ಜೋತ ಮಾಡ್ತಾನೆ
ಜೀತಾ ಮಾಡೋ ದಡಿಯಾಂತಂದ್ರೆ
    ಕಂಬೀ ಕೀಳ್ತಾನೆ

ಸಂಜೇ ಹೊತ್ತಿಗೆ ಸಂತೇಪೇಟೆ
    ಚೌಕ ಸೇರ್ತಾನೆ
"ಸ್ವಾರ್ಥ ಬಿಡ್ರೋ" ಅಂತ ಭೂಪ್ತಿ
    ಲೆಕ್ಚರ್ ಹೊಡೀತಾನೆ!

ಎ. ಎಸ್. ರಾಮಕೃಷ್ಣ.



:—"ಹೀಗೆಲ್ಲಾ ಬಾಗಿಲು ತೆಗೀಬೇಡಯ್ಯ, ನಮ್ಮಲ್ಲೇ ಯಾರಾದರೂ ಈ ಹುಲಿಯನ್ನು ಕದ್ದುಬಿಟ್ಟಾರು!"

# ಒಳಗೆ ಬಂದ ಗೆಳೆಯರು

---

ತಮ್ಮಯ್ಯನವರ ಮನೆ ಬಾಗಿಲಿಗೆ ಬರುತ್ತಲೂ ಅವರನ್ನು ಎದುರು ಗೊಂಡು, "ಒಳಗೆ ಇಬ್ಬರು ಬಂದು ಕೂತು ಕಾಯುತ್ತಿದ್ದಾರೆ, ಅಷ್ಟು ಹೊತ್ತಿನಿಂದ" ಎಂದಳು.

"ಯಾಕೆ ಪತ್ರಿಸಿದಾರೆ?"

"ನಾನು ಕೇಳಲಿಲ್ಲ. ಇಬ್ಬರೂ ಒಳ್ಳೆ ಲಟ್ಕಾಗಳಾಗಿದಾರೆ. ಸಾಲವ್ರೋ ಶೂಲವ್ರೋ ಏನೋ ಅಂತ, ನಾನು ಸುಮ್ಮನಾಗಿಬಿಟ್ಟೆ....ಅವರು ಮಾತಾಡುವುದನ್ನು ಕೇಳಿದರೆ, ನೌಕರಿ ಗೀಕರಿ ಅಂತ ಗೊತ್ತಾಗುತ್ತೆ"

"ಸದ್ಯಃ....ಏನುಮಾಡಿದಿಯಾ ಅವರನ್ನ?"

"ನಿಮ್ಮ ರೂಮಲ್ಲೇ ಮಂದಳಿಗೆ ಹಾಸಿ ಕೂರಿಸಿದೇನೆ, ಒರಗು ದಿಂಬು ಕೊಟ್ಟು. ಪಕ್ಕದ ಮನೆಯಿಂದ ಪುಡಿ ತರಿಸಿ ಕಾಫಿ ನೈವೇದ್ಯಾನೂ ಪೂರೈಸಿದೆ... ನಿಮ್ಮ ಸಂಗಡ ಅವರೂ ಜೈಲಲ್ಲಿದ್ದರಂತಲ್ಲಾ....ಆಗ, ನನ್ನ ಹಸ್ತಗುಣಾನ ಅವನ ಮುಂದೆ ಹೇಳಿ ಜಂಬ ಕೊಚ್ಚಿಕೊಂಡಿದ್ದರಂತೆ. ಹೇಳಿದರು, ನನಗೆ.... ಅಹರೆ. ಕಾಫಿ ಚೆನ್ನಾಗಿತ್ತು ಅಂತ ಅದರ ಅರ್ಥವೋ, ಚೆನ್ನಾಗಿರಲಿಲ್ಲ ಅಂತ ಅರ್ಥವೋ, ಗೊತ್ತಾಗಲಿಲ್ಲ...."

"ಜೈಲಲ್ಲಿದ್ದಾಗ ನಾನು ಯಾರಿಗೂ ಹೊರಗೆ ಬಂದಾಗ ನೌಕರಿ ಗೀಕರಿ ಕೊಡಿಸುತ್ತೇನೆ ಅಂತ ವಾಗ್ದಾನ ಮಾಡಿಲ್ಲವಲ್ಲಾ...."

"ಏನೋ ಎಂಥೊ? ಆಗಿನ ಅಮಲಿನಲ್ಲಿ. ಜನ ಸೇವಾ ಜನಾರ್ದನ ಸೇವೆ ಅಂತ ಏನೇನು ಬುರುಡೆ ಬಿಟ್ಟಿರೋ....ಈಗ ಬಂದು ಕುತ್ತಿಗೆ ಕುಯ್ಯುತ್ತಿದ್ದಾರೆ ಅನುಭವಿಸಿ"

"ಅಯ್ಯೋ, ಅಲ್ಲ ಕಣೆ! ಸುಮಾರು ಸಾವಿರ ಜನ ಇದ್ದರು, ಆ ಜೈಲಲ್ಲಿ ಭಾಷಣ ಮಾಡುವಾಗ, ಅಣ್ಣ ತಮ್ಮಂದಿರೆ, ಅಂತೇವೆ, ಸೌಭಾಗ್ಯ ಸೂರ್ಯೋದಯ. ಅಂತೇವಿ, ನಾಳೆ ನಿಮಗೆಲ್ಲ ಅನ್ನ ವಸತಿ ದೊರಕಿಸಿ ಕೊಡೋ ಜವಾ

ಬ್ಯಾರಿ ನಮ್ಮದು, ಅಂತೀವಿ. ಅದನ್ನೇ ನೆಚ್ಚಿಕೊಂಡು, ಈಗ ಮನೆಗೆ ನುಗ್ಗಿ ಸಾಲದ ಕಾಫೀನ ಟೀಕಿಸಿ, ನೌಕರಿ ಕೊಡು ಅಂದ್ರೆ, ನಾನು ಯಾವ ಖಜಾನೆಗೆ ಕನ್ನ ಹಾಕಲಿ?"

"ಅನುಭವಿಸಿ, ಅನುಭವಿಸಿ! ನಾಲಗೆ ಹಿಡಿದು ಮಾತಾಡಿ ಅಂತ ನಾನು, ಮದುವೆಯಾದ ದಿನವೇ ಹೇಳಿದೆ, ನಿಮಗೆ. ಕೇಳಿದರೆ ತಾನೆ? ಉದ್ದುದ್ದ ಭಾಷಣ ಹೊಡೆಯೋದು, ಎದ್ದೆದ್ದು ಓಡುವುದು....ಗೆಳೆಯರೆ, ಅನ್ನೋದು, ಬಾಂಧವರೆ, ಅನ್ನೋದು ಬಿಟ್ಟರೇನೇ ಅವರು? ಮನೆಯೊಳಕ್ಕೆ ನುಗ್ಗಿ ಮಾತು ನಡೆಸು ಅಂತಾರೆ... ಉಂ....ಒಳಕ್ಕೆ ನಡೀರಿ... ಏನಾದರೂ ಒಂದು ಸವಾಲು ಹುಡುಕಿ ಅವರನ್ನ ಆಚೆಗೆ ಕಳುಹಿಸಿ. ಊಟಕ್ಕೆ ಇಲ್ಲೇ ನಿಂತರೆ, ಉಪವಾಸವೇ ಗತಿ"

"ಅಲ್ಲ, ಕಣೆ! ನನಗೇನೇ ಒಂದು ನೌಕರೀ ಸಂಪಾದಿಸೋ ಸೌಭಾಗ್ಯ ಸಿಗಲಿಲ್ಲ.. ಇಷ್ಟು ದಿನವಾದರೂನೂ.. ನಾನೇ ಇನ್ನೂ ಕಂಗಾಲಾಗಿ ಕಣ್ಣು ಮಿಟಕಿಸುತ್ತಾ ಇದೇನೆ ಕಂಡವರ ಬಾಗಿಲಲ್ಲಿ ಇನ್ನು ಈ ಲಟ್ಯಾಗಳಿಗೆ ಎಲ್ಲಿಂದ ಲಪಟಾಯಿಸಲೀ ನಾನು ನೌಕರೀನ?"

"ನನಗೇನು ಗೊತ್ತು! ಇವರಂತೂ ನೌಕರಿ ಗೀಕರಿ ಅಂತ ಒಟಗುಟ್ಟುತ್ತಲೇ ಇದಾರೆ, ಒಳಗೆ"

"ಓ! ಹೀಗಿರಬಹುದು, ಕಣೆ! ಒಟ್ಟಿಗೆ ಜೈಲಲ್ಲಿದ್ದವನು. ತಾಪತ್ರಯ ಪಡುವವನು, ಪಾಪ, ಅಂತ ಅವರೇ ನನಗೆ ನೌಕರಿ ಕೊಡುವುದಕ್ಕೆ ಬಂದಿದಾರೋ ಏನೊ? ಛೆ! ಇಷ್ಟು ಹೊತ್ತು ತಡಮಾಡಬಾರದಾಗಿತ್ತು, ನಾನು. ಉಂ. ಹಾಗೆಯೇ ಇರಬೇಕು. ಇವರು ತಮಗೆ ನೌಕರಿ ಕೇಳೋಕೆ ಬಂದಿಲ್ಲ, ನನಗೆ ಕೊಡಿಸೋಕೆ ಬಂದಿದ್ದಾರೆ ...ಅವರು ಗಿಟ್ಟಿಸಿಕೊಂಡಿದಾರೆ, ನನ್ನ ಜ್ಞಾಪಕ ಬಂದಿದೆ. ನನಗೂ ಒಂದು ಕೊಡಿಸೋಣ ಅಂತ ಬಂದಿದಾರೆ, ಹಾಗೆಯೇ ಇರಬೇಕು. ವಸ್ತು ಸ್ಥಿತಿ .. ಬಾ, ಹೋಗೋಣ, ಒಳಗೆ ..."

— ಶಾಮಂತ್



# ಚುನಾವಣೆ ಭಾಷಣ

ಎದ್ದು ನಿಂತು. ಮಾತಿಗೆ ಪ್ರಾರಂಭಿಸುವಾಗ, ಉಮೇದುವಾರ ಮಹಾಶಯ 'ತಾನುಂಟೋ ಮೂರು ಲೋಕವುಂಟೋ?' 'ನಾನು ಹಿಡಿದ ಕುಮರಿಗೆ ಕೊಂಬು ನಾಲ್ಕು', 'ಕೋಳಿ ಕೂಗದಿದ್ದರೆ ಸೂರ್ಯ ಮೂಡುವುದೇ ಇಲ್ಲ', "ಧರ್ಮ ಸಂಸ್ಥಾಪನಾರ್ಥಾಯಾ ಸಂಭವಾಮಿ ಸಭೇ ಸಭೆ?— ಎಂಬ ಮಂತ್ರಗಳನ್ನು ಮನದಲ್ಲಿ ನೆನೆದುಕೊಳ್ಳಬೇಕು. ನಂತರ ಬಾಯಿಬಿಟ್ಟು. ಎದುರು ಪಕ್ಷದವರ ಬಣ್ಣ, ಕೇಡು, ಎಂದು ಬೆಂಕಿಕಾರಬೇಕು.

ಅದು; ಗೆಲುವಿನ ದಾರಿ ಬೆಂಕಿ. ಕಾರ. ಅಧೋಗತಿ, ಅಧಃಪಾತಾಳ, ನರಕ ಪಾಪ, ಕರಾಳ ನೃತ್ಯ, ಕುರುಡರು ಕುರುಡರನ್ನು ನಡೆಸಿ ಹಳ್ಳಕ್ಕೆ ಬಿದ್ದಂತೆ, ಕರೀಪೇಟೆ ಕದೀಮರು, ಇತ್ಯಾದಿ ಮಾತುಗಳನ್ನೆಲ್ಲ ಮನೆಯಲ್ಲಿ ಕನ್ನಡಿ ಎದುರು ಉಚ್ಚರಿಸಿ ಅಭ್ಯಾಸಮಾಡಿಕೊಳ್ಳಬೇಕು. ಕಣ್ಣು ಕೆಂಪಗೆ ಮಾಡಿಕೊಂಡು ಹಲ್ಲನ್ನು ಕಟಕಟನೆ ಕಚ್ಚಿ ಔಡೊತ್ತಿ, ತೋಳು ಕುಲುಕಿ ತೊಡೆ ತಟ್ಟಿ, ಕಾಳಗಕ್ಕೆ ಅಣಿಮಾಡಿಕೊಳ್ಳಬೇಕು ಅದಕ್ಕೆ ತಕ್ಕ ತಾಕತ್ತನ್ನು ಸಂಪಾದಿಸಿಕೊಳ್ಳಬೇಕು.

ಹಾಗೆಯೇ, ತಮ್ಮನ್ನು ಅಟ್ಟದಮೇಲೆ ಕೂರಿಸಿಕೊಳ್ಳುವ ಸರ್ಕಸನ್ನು ಅತ ಕಲಿಯಬೇಕು. ನಾನು ನನ್ನ ಅನುಭವದಿಂದ ಹೇಳುತ್ತೇನೆ, ನನ್ನ ತನು ಮನ ಧನ, ನನ್ನ ನಿರಂತರ ಪರಿಶ್ರಮ, ನನ್ನ ಶಕ್ತಿಮೀರಿ, ನನ್ನ ಧಮನಿಯಲ್ಲಿ ರಕ್ತವಿರುವವರೆಗೂ— ಎಂದು ಬಗೆ ಬಗೆಯಾಗಿ ನಾನು ನನ್ನ ನನ್ನಿಂದ ನನಗೋಸ್ಕರ, ನನಗಾಗಿ, ನನ್ನ ಸಲುವಾಗಿ, ಎಂಬ ವಿಭಕ್ತಿಗಳನ್ನೆಲ್ಲ ಭಕ್ತಿಪುರಸ್ಸರ ಮಹಾ ಜನಗಳ ಅಡಿದಾವರೆಯಲ್ಲಿ ಅರ್ಪಿಸಿ, ಮಂದಹಾಸ ಬೀರಬೇಕು.

ಸಭಿಕರಲ್ಲಿ ಹಲವರಿಗೆ ಹಣಕೊಟ್ಟು, ಪರಪಕ್ಷಗಳ ಅವಹೇಳನ ಸಮಯದಲ್ಲೂ, ಸ್ವಪಕ್ಷ ಇವಹೇಳನ ಸಮಯದಲ್ಲೂ ಕರತಾಡನ ಮಾಡಿಸುವುದೂ ಸೂಕ್ತ.

— ಸಶೇಷ.

# ನನ್ನ ದಿನ ಚರಿ

(ನಮ್ಮ ಸ್ವಂತ ಬಾತ್ಮೀದಾರರಿಂದ)

---

"ನಮ್ಮ ಪತ್ರಿಕೆಗೆ ಇಂತಿಂತಹ ಆಹ್ವಾನಗಳು ಈ ದಿನ ಬಂದಿವೆ. ನೀನು ಅಲ್ಲಿಗೆಲ್ಲಾ ಹೋಗಿ ವರದಿ ಒಪ್ಪಿಸು" ಎಂದು ಯಾವ ಘಳಿಗೇಲಿ ಸಂಪಾದಕರು ಹೇಳಿ ಆ ಆಹ್ವಾನದ ಕಂತೇನ ನನ್ನ ಕೈಲಿ ಕೊಟ್ಟರೋ ಕಾಣೆ. ಅವತ್ತೆಲ್ಲಾ ದಿನ ಅಲೆದ ಹಾಗೆ ಅಲೆದೆ. ಆ ದಿನ ಚರಿಯನ್ನೇ ಬರೆದಿದ್ದೇನೆ

ಹಿಂದೊಮ್ಮೆ ಪ್ರಸಿದ್ಧ ಮಾಸ ಪತ್ರಿಕೆಯಲ್ಲಿ (ಅದು ಇಂಗ್ಲೀಷ್ ಭಾಷೆಯದು–ಆದರೆ ಅದನ್ನು ಕನ್ನಡಕ್ಕೆ ಸಾಕಷ್ಟು ಜನ ಸಾಕಷ್ಟು ಬಾರಿ ಕದ್ದಿರಲಿಕ್ಕೇ ಬೇಕು ಅನ್ನಿ) ಒಂದು ದಿವ್ಯವಾದ ಪುಟಾಣಿ ಕಥೆ ಪ್ರಕಟವಾಗಿತ್ತು.

ಒಂದಾನೊಂದು ಕಾಲದಲ್ಲಿ ಒಂದು ಊರಿನಲ್ಲಿ ಒಬ್ಬ ಮನುಷ್ಯ ಇದ್ದನಂತೆ. ಆ ಊರಿನಲ್ಲಿ ಒಂದೇ ಒಂದು ಗಡಿಯಾರ ಇತ್ತಂತೆ. ಗಡಿಯಾರ ಅಂದರೆ ಈಗಿನ ಕಾಲದವುಗಳಂತೆ, ಕೂದಲು ಸ್ಪ್ರಿಂಗ್, ಹಲ್ಲಿನ ಚಕ್ರ, ನಾಲಿಗೆ ಮುಚ್ಚಳ, ತೊಗಲಿನ ಬಂಧನ, ಹೀಗಿದ್ದಿದ್ದಲ್ಲ. ಒಂದು ಮಡಕೆ ತಳದಲ್ಲಿ ಒಂದು ತೂತು. ಬೆಳಿಗ್ಗೆ ಎದ್ದು ಆ ಮಡಕೆ ತುಂಬಾ ನೀರು ತುಂಬುತ್ತಿದ್ದ. ಅದು ಸಾಯಂಕಾಲದ ವೇಳೆಗೆ ಬರಿದಾಗುತ್ತಿತ್ತು. ಕಾಲು ಬರಿದಾದಾಗ ತಿಂಡಿ ತಿನ್ನೋದು. ಅರ್ಧ ಬರಿದಾದಾಗ ಊಟಮಾಡೋದು. ಮುಕ್ಕಾಲು ಬರಿದಾಗೋತನಕ ಮಲಗಿರೋದು. ಹೀಗೆ ಅವನು ಈ ನೀರ್ಮಡಿಕೆ ಗಡಿಯಾರ ನೋಡಿಕೊಂಡು ಕೆಲಸ ಮಾಡ್ತಾ ಇದ್ದ. ದೃಢಕಾಯನಾಗಿದ್ದ. ಯಾವಾಗಲೂ ಒಂದು ಹಾಡನ್ನೋ ಪದ್ಯಾನೋ ಪಲುಕುತಾನೇ ಇರುತ್ತಿದ್ದ.

ಕೆಲವು ತಿಂಗಳಾಯಿತು. ಮಡಕೆ ತಳದ ತೂತು ಕ್ರಮೇಣ ದೊಡ್ಡದಾಯಿತು. ಆದರೆ ಈತನಿಗೆ ಗೊತ್ತೇ ಆಗಲಿಲ್ಲ. ಕಾಲುಭಾಗ ಬರಿದಾದಾಗ ತಿಂಡಿ ತಿನ್ನುತ್ತಿದ್ದ. ಅಷ್ಟು ಮುಗಿಸೋ ಹೊತ್ತಿಗೆ ಅರ್ಧಭಾಗ ಬರಿದಾಗುತ್ತಿತ್ತು. ಊಟಮಾಡುತ್ತಿದ್ದ. ಕೈತೊಳೆಯುವ ವೇಳೆಗೆ ಮುಕ್ಕಾಲು ಬರಿದಾಗುತ್ತಿತ್ತು. ಅಯ್ಯೋ! ದಿನ ಕಳೆದುಹೋಯ್ತು ಅಂತ, ಬಸುರಿಯರು ಅಂದಹಾಗೆ, ಇವನೂ

ಅಂದುಕೊಂಡು ಬೇಗ ಬೇಗ ಬಿವರಿಳಿಸುತ್ತ ಕೆಲಸ ಮಾಡಲು ಶುರು ಮಾಡಿದ ಆಗ ನಗುಮುಖ ಹೋಯ್ತು, ಆ ಹಾಡು ಸಂಗೀತ ಮಾಯವಾಯ್ತು, ಬೇಗ ಬೇಗ ದುಡಿದೂ ದುಡಿದೂ ಕೊನೆಗೆ ರೇಗಿ ಮಡಕೆ ಒಡೆದು ತಾನು ತಲೆ ಚಚ್ಚಿಕೊಂಡು ಪ್ರಾಣಬಿಟ್ಟನಂತೆ.

ಅಲ್ಲಾ ! ಈ ಕತೇನ ಯಾಕೆ ಜ್ಞಾಪಿಸಿಕೊಂಡೆ ಗೊತ್ತೆ ? ನಮ್ಮ ಯಜಮಾನರು, ಸಂಪಾದಕರು ಹೇಳಿದರು ಅಂತ ನಾನು ಹೊರಟೆ. ಬೆಳಿಗ್ಗೆ ೭ ಗಂಟೆಗೆ ಒಂದು ಸಮಾರಂಭ. ರೈಲ್ವೆ ನಿಲ್ದಾಣದಲ್ಲಿ ಪ್ರಸಿದ್ಧರಾದ ಶ್ರೀಯುತರು ಬರುತ್ತಾರೆ. ಅವರ ಸ್ವಾಗತ ವರದಿಮಾಡುಕ್ಕೆ ಅಲ್ಲಿ ನಾನು. ೮-೩೦ ಗಂಟೆಗೆ ಇಂತಹ ಸಾರ್ವಜನಿಕ ಸಂಸ್ಥೆಯ ಬೆಳ್ಳಿ ಹಬ್ಬ. ಅಲ್ಲಿ ವರದಿಗಾಗಿ ಸಿದ್ಧ. ೧೦-೩೦ ಗಂಟೆಗೆ ಇಂತಹ ಸಂಸ್ಥೆಯ ಕಬ್ಬಿಣದ ಹಬ್ಬ. ಅಲ್ಲಿ ವರದಿಗಾಗಿ ಇರಬೇಕು ೧೨ ಗಂಟೆಗೆ ಇಂತಹ ಪ್ರಸಿದ್ಧ ಪುರುಷರ ಪ್ರಯಾಣ. ಬೀಳ್ಕೊಡುವ ವರದಿಗಾಗಿ ಇರಬೇಕು. ೨ ಗಂಟೆಗೆ ವಿಮಾನ ನಿಲ್ದಾಣದಲ್ಲಿ ಶ್ರೀ....ವರು ಬರುವರು ಅವರನ್ನು ಎದುರುಗೊಳ್ಳುವ ವರದಿ. ೪ ಗಂಟೆಗೆ ಲಾಲ್‌ಬಾಗಿನಲ್ಲಿ ಅನಾವರಣ ಮಹೋತ್ಸವ ಮಾಡುತ್ತಾರೆ. ಅಲ್ಲಿರಬೇಕು ಛಾಯಾಚಿತ್ರ ತೆಗೆಯಲು. ೫ ಗಂಟೆಗೆ ವರದಿಗಳನ್ನೆಲ್ಲಾ ಬರೆಯಬೇಕು. ೫-೩೦ ಗಂಟೆಗೆ ಪ್ರಕಟಿಸಬೇಕು. ಇಷ್ಟಕ್ಕೂ ಎರಡೇ ಕಾಲಂ ಜಾಗ. ಅಷ್ಟಷ್ಟಕ್ಕೇ, ಯಾವುದನ್ನೂ ಬಿಡದೆ. ವರದಿ ಒಪ್ಪಿಸಬೇಕು. ಈ ಅವಸರದ ಕೆಲಸ ಮಾಡ್ತಾ ಮಾಡ್ತಾ ೬ ಗಂಟೆಗೆ ಮುಗಿಸಿದಾಗ, ಆ ಕತೆ ಜ್ಞಾಪಕಕ್ಕೆ ಬಂತು.

ಗಡಿಯಾರ ಕಿತ್ತೆಸೆದು; ಸಂಪಾದಕರನ್ನು ಶಪಿಸಿ, ತಲೆ ಚಚ್ಚಿಕೊಂಡು ಆರಾಮವಾಗಿ ಪ್ರಾಣ ಬಿಡೋದೇ ವಾಸಿ ಅನ್ನಿಸಿತು.

ಆದರೆ ಮಾರನೆ ದಿವಸ ಸಂಪಾದಕರ ಹುಕುಂ ಬಂತು ನಿನ್ನೆ ತುಂಬಾ ದುಡಿದಿದ್ದೀಯಾದ್ದರಿಂದ ಈ ದಿನ ಎ. ಐ ಸಿ. ಸಿ. ಸಮ್ಮೇಳನವನ್ನು ವರದಿಮಾಡು ಅಂತ. ಬೆಳಿಗ್ಗೆ ಲಕ್ಷಣವಾಗಿ ತಿಂದು ಸಮ್ಮೇಳನಕ್ಕೆ ಹೋದೆ. ಹಾಗೆಯೇ ಒರಗಿಕೊಂಡೆ. ಎದ್ದಾಗ ಮೂರು ಗಂಟೆಯಾಗಿತ್ತು. ಕೋರಂ ಸಾಲದು, ನಾಳೆ ಸಭೆ ಇಲ್ಲಾ, ಕೋರಂ ಉಂಟು, ಇದ್ದಷ್ಟು ಸಾಕು. ಈ ತೆರನಾದ ಮಾತುಗಳು ಕೇಳಿಸಿತು. ಪಕ್ಕದ ಚಾ ಅಂಗಡಿಗೆ ಹೋಗಿ ಮಧ್ಯಾಹ್ನ ಬಿದ್ದ ಕಸವನ್ನು ವರದಿ ಮಾಡಿದೆ.

ಭೇಷ್ ಅಂತ ಬೋನಸ್ ಕೊಟ್ಟರು.

—ಪ್ರಸಾದ್.

---

# ಗದ್ಯ—ಪದ್ಯ

ಗದ್ಯ—ಗಡಹಾರೆ!
ಪದ್ಯ—ಪೆಟ್ರೋಲು!
ಯಾತ್ರಾಗುನೂ ಮಾತು!
ಆಗ್ ಬಾರ್ದೂ ಪೋಲು! . ೧ .

ಒಂದು – ಕೆತ್ತ್ತೈತೆ!
ಒಂದು—ಸುಡತ್ತೈತೆ!
ಎಳ್ಡುನೂ ಮನಸ
ಮ್ಯಾಕ್ ಎತ್ತೈತೆ! . ೨ .

— ೧



ಧರ್ಮಸಾಗರರ— ಶಕ್ಲಿ (ಫ್ ಮುಂದಿನ ಚುನಾವಣೇಲಿ ಯಾವ ತಲೆಯುಡಾಪ್ಪ.

# ಅಂದಿನ ಕೋರ್ಟಿನಲ್ಲಿ

---

ಸಾಕ್ಷಿ ಹೇಳು ಅಂತ ಕೋರ್ಟಿಗೆ ಕರೆದಿದ್ದರು. ಕೋರ್ಟು ಅಂದರೇ ನನಗೆ ಭಯ. ಅದಕ್ಕಾಗಿ ಅವರು ಹೇಳಿದ ಹಾಗೇ ಹನ್ನೊಂದು ಗಂಟೇಗೆ ಬಾಗಿಲ ಹತ್ತಿರ ಹಾಜರಾದೆ ಜವಾನ ಬಂದು ಬಾಗಿಲು ತೆರೆದಾಗ ನನ್ನನ್ನು ನೋಡಿ, "ಸೋಮಿ, ಒಂದು ಬೀಡೀ ಕೊಟ್ಟೇರಾ ಎಂದ. ಇಲ್ಲವಲ್ಲಪ್ಪಾ ಅಂತ ನನ್ನ ವ್ಯಾಕುಲವನ್ನು ತೋರ್ಪಡಿಸಿದೆ. ಹೋಗಲೀ ಬಿಡಿ, ಒಂದು ಕಡ್ಡಿ ಕೊಡಿ ಬೀಡಿ ಹಚ್ಚಿಕೋತೀನಿ ಎಂದ. ಅದೂ ಇಲ್ಲವಲ್ಲಪ್ಪಾ ಎಂದೆ. ನನ್ನನ್ನು ನೋಡಿ ಅವನು ಈಗ ವ್ಯಾಕುಲ ತೋರ್ಪಡಿಸಿ, ಬಿಡ್ತು ಬಂದು ಕೂತುಕೊಳ್ಳಿ ಎಂದ. ನಾನು ಹೋಗಿ ಒಂದು ಬೆಂಚಿನ ಮೇಲೆ ಕೂತುಕೊಂಡೆ.

ಎದುರಿಗೆ ಒಂದು ಕ್ಯಾಲೆಂಡರ್. ರವಿ ವರ್ಮನ ಲಕ್ಷ್ಮಿಯ ಚಿತ್ರ ಅದರಲ್ಲಿ. ಲಕ್ಷ್ಮಿ ಎಷ್ಟು ತುಂಬಿಕೊಂಡಿದ್ದಾಳೆ! ದೇಹ ರೇಖೆ ಕೂಡ ಅದೆಷ್ಟು ಚೆನ್ನಾಗಿ ಅಲ್ಲಲ್ಲಿ ಬಳುಕುತ್ತಿದೆ! ಕೆಲವರು ಕೈತುಂಬ ಲಕ್ಷ್ಮಿಯನ್ನು ಹಿಡಿಯೋಣ ಅಂತಾರೆ. ಇನ್ನು ಕೆಲವರು ತೋಳುತುಂಬ ಹಿಡಿಯೋಣ ಅಂತಾರೆ. ಅವರಿಬ್ಬರೂ ನ್ಯಾಯವಾಗಿಯೇ ಹಾಗೆ ಮಾಡ್ತಾರೆ ಅನ್ನಿಸಿತು—ಆ ಕ್ಯಾಲೆಂಡರ್ ನಿಂದ ದೃಷ್ಟಿ ದಾಟಿಸಿದೆ.

ಇನ್ನೊಂದು ಕ್ಯಾಲೆಂಡರ್. ಅದೇ ರವಿ ವರ್ಮನ ಇನ್ನೊಂದು ವರ್ಣ ಚಿತ್ರ. ದಮಯಂತಿ ಹಂಸಕ್ಕೆ ಏನೋ ಗುಪ್ತ ಸಂದೇಶ ಹೇಳುತ್ತಿರುವುದು. ಆಹಾ! ಆ ದಮಯಂತಿ ಕೂಡ ಎಷ್ಟು ಸೊಗಸಾಗಿ ವಾಲಿದ್ದಾಳೆ. ಆ ಕಂಭಕ್ಕೆ — ನೋಡುಕ್ಕೆ ಮುಂಚೆ ಕಣ್ಣು ತೊಳಕೊಂಡು ನೋಡಬೇಕು. ಪೈ ಪುಷ್ಟಿ ಕೂಡ ಎಷ್ಟು ಚೆನ್ನಾಗಿದೆ. ಆ ಚಿತ್ರ ನೋಡಿದರೇ ಗೊತ್ತಾಗುತ್ತೆ, ಆ ದಮಯಂತಿ ನಳಪಾಕವನ್ನು ಚೆನ್ನಾಗಿ ತಿಂದಿದ್ದಿರಬೇಕು ಅಂತ. ಅವಳ ತೋಳು ನೋಡಿ ಅದೇನು ಕಟ್ಟುಮಸ್ತಾಗಿದೆ. ನಾಗರವಂಕಿ ತೊಡಿಸದೇ ಇದ್ದರೆ ಇನ್ನೂ ಬೆಳೆದು ಬಿಡುತ್ತೇನೋ ಅನ್ನೋ ಹಾಗಿದೆ. ಮುಖ ನೋಡಿ, ಮುದ್ದಿಡೋ ಹಾಗಿದೆ. ನನ್ನೇ ನೋಡುತ್ತಿದ್ದಾಳೋ ಅನ್ನೋ ಹಾಗೆ ಇಲ್ಲವೇ ಆ ಕಣ್ಣುಗಳು. ಮರಾಟೆ ತರಹ ಸೀರೆ ಉಟ್ಟಿದಾಳೆ. ಅಂದ ಮೇಲೆ ದಮಯಂತಿ ಆ ಕಡೆಯವಳೇನೋ— ಯಾರು ಬಲ್ಲರು?

ಹಾಗೇ ದೃಷ್ಟಿ ಮುಂದಕ್ಕೆ ಸರಿಸಿದೆ. ಅಲ್ಲಿ ಇನ್ನೊಂದು ಕ್ಯಾಲೆಂಡರ್. ಅದರಲ್ಲಿ ನವ ಬಂಗಾಳೀ ಕೃತ ವಸ್ತುವೊಂದು. ವಸ್ತುವಲ್ಲಾ! ಅದೂ ಹುಡುಗಿಯ ಚಿತ್ರದಂತೆ ಕಾಣುತ್ತದೆ. ಕಣ್ಣುಗಳನ್ನು ನೋಡಿದರೆ, ಓಹೋ! ಏನೋ ಕಣ್ಣಿನ ಖಾಯಿಲೆ ಇವಳಿಗೆ ಅನ್ನಿಸುತ್ತದೆ ಮೇಲ ರೆಪ್ಪೆ ಮೇಲಕ್ಕೆ ಹೋಗುವಂತೇ ಕಾಣುವುದಿಲ್ಲ ಈಕೆ ಬಹುಶಃ ಕಣ್ಣೆತ್ತಿ ನೋಡಲಾರಳು—ಮುಖ ಎತ್ತೀ ನೋಡಬೇಕು ಎಷ್ಟು ಕಷ್ಟವೋ ಪಾಪ! ಕಡೆಗಣ್ಣು ದೃಷ್ಟಿ ಹಾಯಿಸುವ ಹಾಗೇ ಇಲ್ಲ. ತ್ಸು! ತ್ಸು! ಇವಳ ಪ್ರೇಮಮಯ ಜೀವನ ಮುಳ್ಳು ತುಂಬಿದಂತಾಗಿರಬೇಕು. ಅಲ್ಲಾ! ಅವಳ ಎದೆ ನೋಡಿದಿರಾ! ಇವಳೋ, ಇವನೋ ಎನ್ನುವ ಸಂಶಯ ಬರುವಂತಿದೆ· ಅಲ್ಲವೇ? ಒಂದು ಮುಷ್ಟೀಲಿ ಇವಳ ಸೊಂಟಾನ ಸುತ್ತಗಟ್ಟಬಹುದು ದಿಟವಾಗಲೂ ಇವಳಿಗೆ ಕ್ಷಯ ಅಂತ ಹೇಳಲು ಏನೂ ಕಷ್ಟವಾಗಲಾರದು. ಅಷ್ಟು ಹೇಳುಕ್ಕೆ ಡಾಕ್ಟರೂ ಬೇಡ. ಎಕ್ಸ್‌ರೇಯೂ ಬೇಡ ಅಲ್ಲಾ ಕಾಲುಗಳನ್ನು ನೋಡಿ. ಓಹೋ! ರಿಕೆಟ್ಸ್ ಅಂತಾರಲ್ಲಾ ಹಾಗೆ ಬಾಗಿದೆ. ಅಯ್ಯೋ ಪಾಪ! ಏನೇನು ಖಾಯಿಲೆಯೋ ಇವಳಿಗೆ. ಔಷಧಿಯ ಜಾಹಿರಾತಿನ ಹುಡಗಿ ಇರಬಹುದು. ಕ್ಯಾಲೆಂಡರಿನಲ್ಲಿ ಬರೆದಿದ್ದನ್ನು ನೋಡಿದೆ. ಸುಗಂಧ ಬತ್ತಿಯ ಜಾಹಿರಾತು, ಈ ನಿರ್ಗಂಧ ಹುಡುಗಿ ಚಿತ್ರ!!

ಅಯ್ಯೋ! ದೇವರೇ! ಅಂತಹ ವಸ್ತುವಿಗೆ ಕಣ್ಸೆಳೆವ ಹುಡುಗಿಯ ಚಿತ್ರ ಹಾಕಬಾರದಾಗಿತ್ತೇ! ಅನ್ನಿಸಿತು.

ಅದನ್ನೇನೋ ಕಣ್ಣು ನೋಡುತ್ತಿತ್ತು. ಆದರೆ ಮನಸ್ಸು ಎಲ್ಲೋ ಹಾರಿ ಹೋಗಿತ್ತು.

ರವಿವರ್ಮ ಏಕೆ ಹಾಗೆ ತುಂಬಿದ ದುಂಡು ಹುಡುಗಿಯರನ್ನು ಚಿತ್ರಿಸಿದ. ಅವನೇನಾದರೂ ಸೆಣಕಲನಾಗಿ, ಫ್ರಾಯ್ಡ್ ಶಾಸ್ತ್ರೋಕ್ತ, ತುಂಬಿದವರನ್ನು ಪ್ರೇಮಿಸಿ, ಹಾಗೆ ಬರೆಯುತ್ತಿದ್ದನೇ? ಅಥವಾ ಅವನ ಕಾಲದಲ್ಲಿ ಇದ್ದವರೆಲ್ಲಾ ತಿಂದು ತೇಗಿ ತುಂಬಿಕೊಂಡಿದ್ದರೇ? ಸ್ವಾತಂತ್ರ್ಯ—ನಾವು—ನಮ್ಮದು—ಇಂತಹ ಮಾತುಗಳಿಗೆ ಬೆರಗಾಗದೆ, ಉಣ್ಣೋಣ, ತಿನ್ನೋಣ, ಸುಖವಾಗಿರೋಣ, ಹಿತಜೀವನ ಮಾಡೋಣ ಅಂತ ಆಗಿನವರು ಇದ್ದರೇ?

ಹಾಗೂ ನಮ್ಮ ನವ ಕಲಾವಿದ ಬರೆದ ಚಿತ್ರ ಅರೆ ಹೊಟ್ಟೆಯ ಅರೆ ಬಟ್ಟೆಯ, ಖಾಯಿಲೆಗಳೇ ಪ್ರತೀಕವಾದಂತಹ ನಮ್ಮ ಈಗಿನ ರಮಣಿಯರನ್ನು ಪ್ರತಿಬಿಂಬಿಸುತ್ತದೆಯೆಷ್ಟು. ಈ ಚಿತ್ರಗಳನ್ನು ವೈದ್ಯಕೀಯ ಶಾಲೆಗಳಲ್ಲಿರಿಸಿ ಈ ಚಿತ್ರದಲ್ಲಿ ಯಾವ ಯಾವ ಕಾಹಿಲೆಗಳಿವೆ? ಯಾವ ಯಾವ ಕಾರಣಗಳಿಂದ ಹಾಗೆ ಹೇಳಲು ಸಾಧ್ಯ ಎಂದು ಪ್ರಶ್ನೆ ಕೇಳಬಹುದಲ್ಲವೇ?

ಇರಬಹುದು! ಇರಬಹುದು! ಕಾಲಕ್ಕೆ ತಕ್ಕಂತೆ ಕಲಾವಿದರೂ ಜನರನ್ನು ಪ್ರತಿಬಿಂಬಿಸುತ್ತಾರೆ. ಅದಕ್ಕೇ ಇದ್ದಿರಬೇಕು, ಈಗಿನ ಜನರೆಲ್ಲಾ ಆಗಿನ ಚಿತ್ರಗಳಿಗೆ ಬೆರಗಾಗಿರೋದು ತಮಗಿಲ್ಲದ್ದನ್ನು ಅವರಲ್ಲಿ ನೋಡಿ, ಅದನ್ನೇ ಬಯಸುವುದು ಇದೇ ದಿಟವಾದರೆ ಈಗಿನ ಚಿತ್ರಗಳನ್ನು ಮೆಚ್ಚಬೇಕಾದರೆ, ಹೊಟ್ಟೆ ತುಂಬಿದವರೇ ಇರಬೇಕು. ಮುಂದಕ್ಕೆ—ಹೊಟ್ಟೆ ತುಂಬಾ ಹಿಟ್ಟು ಸಿಕ್ಕಿ, ಜುಟ್ಟಿಗೆಲ್ಲಾ ಮಲ್ಲಿಗೆ ಮುಡಿದು, ಮೈಯೆಲ್ಲಾ ಬಟ್ಟೆ ಹಾಕಿದಾಗ, ನಮ್ಮ ಈಗಿನ ಚಿತ್ರಗಳನ್ನು ಕಾಯಿಲೆಯ ಸಾಕ್ಷಾತ್ ರೂಪಗಳನ್ನು ಜನರು ಮೆಚ್ಚಲೇ ಬಹುದು

ಹೀಗೆಲ್ಲಾ ಮನಸ್ಸು ಓಡುತ್ತಿತ್ತು.

ದೃಷ್ಟಿ ಗೋಡೆಯ ಮೇಲೆ ಮುಂದಕ್ಕೆ ಸಾಗಿತು. ಗಡಿಯಾರ ಎರಡು ಗಂಟೆ ತೋರಿಸುತ್ತಿತ್ತು. ತಕ್ಷಣ ಹೊಟ್ಟೆ ಹಸಿವು ಕಾಣಿಸಿಕೊಂಡಿತು. ಸುತ್ತಲೂ ನೋಡಿದೆ, ಯಾರೂ ಬಂದಿರಲಿಲ್ಲ ಇನ್ನು ಕಾದರೆ ಸುಖವಿಲ್ಲ ಅಂತ ಹೊರಕ್ಕೆ ಬಂದೆ ಇನ್ನೊಂದು ಸಾರಿ ಕರೆದಾಗ ಹೋಗಿ ಸಾಕ್ಷಿ ಹೇಳಿದರಾಯ್ತು ಅಂತ.

ಇನ್ನೇನು ಹೊರಡಬೇಕು ಅಂತ ಬೈಸಿಕಲ್ ಹಿಡಿದೆ. ಆಗ ಆ ಲಾಯರು ಸಿಕ್ಕಿದರು. "ಏನ್ಸಾರ್ ಎರಡು ಗಂಟೆ ಆಗಿದೆ. ಇನ್ನೂ ಯಾರೂ ಬಂದಿಲ್ಲ. ನನಗೆ ಹಸಿವು, ಹೋಗ್ತೇನೆ" ಎಂದೆ.

"ಇನ್ನೂ ಹನ್ನೊಂದೂವರೆ, ಎರಡೆಲ್ರಿ! ಆಗಿದೆ" ಅಂದರು ಅವರು.

"ಕೋರ್ಟಿನ ಗಡಿಯಾರದಲ್ಲಿ" ಎಂದೆ.

"ಅಯ್ಯೋ! ಅದೇ!! ಅದು ಯಾವಾಗಲೂ ಎರಡುಗಂಟೇನೇ ತೋರಿಸೋದು, ಎರಡು ವರ್ಷದಿಂದ" ಅಂತ ನಕ್ಕ ಆತ.

"ಅಂದ ಹಾಗೆ ನಿಮ್ಮ ಕೇಸು ಮುಂದಿನ ವಾರಕ್ಕೆ ಹಾಕಿದ್ದಾರೆ. ನಿಮಗೆ ತಿಳಿಸಲು ಆಗಲಿಲ್ಲ. ನೀವು ಹೋಗಬಹುದು" ಅಂದ.

—ಕುಮಾರ್.

---

# ಪ್ರಗತಿ ಕವನ

(ಶಿಶುಗೀತೆ)

ಮೇಲುನೋಡು ಚಂದ್ರಬಿಂಬ!
ಅಗೋ ನೋಡು ಲಾಂದ್ರ ಕಂಬ
ತಗೋ ಕೈಗೆ ತಾಮ್ರ ಚಂಬ!

—ಜಿ. ಪಿ. ಸು.




ಅಜ್ಜನಿಗಿಂತ ಕಚ್ಚೆ ಭಾರ

# ಸ್ಪೈ ಸ್ಪೋಟ್

ಶಕುಂತಳಾ ಆವತ್ತು ರಂಗದ ಮೇಲೆ ಬಂದಾಗ, ಮುದುಕರು ಹುಡುಗರು ಮೊದಲಾಗಿ ಬಂದವರೆಲ್ಲರೂ 'ಆ' ಅಂತ ಬಾಯಿಬಿಟ್ಟು ಬೆಚ್ಚು ಬೆರಗಾಗಿ ನೋಡ ಹತ್ತಿದರು. 'ನಾನು ದುಷ್ಯಂತನ ಪಾರ್ಟ್ ಮಾಡುವಹಾಗಿದ್ದರೆ ಎಷ್ಟು ಕಳೆ ಕಟ್ಟುತ್ತಿತ್ತು' ಎಂದೇ ನೋಡಿದ ಗಂಡಸರ ಭಾವನೆ. ದಿಟವಾಗಲೂ ಇವಳನ್ನು ಕಾಳಿದಾಸ ನೋಡಿದ್ದರೆ, ಅವನು ಶಕುಂತಳಾ ದಾಸನಾಗುತ್ತಿದ್ದನೇ ಹೊರತು ಕಾಳಿದಾಸನಲ್ಲ ಎಂದು ಧೈರ್ಯವಾಗಿ ಹೇಳಬಹುದು.

ಅಂತಹ ಸ್ವರದ್ರೂಪಿ. ಶಕುಂತಳಾ, ಕಾಲೇಜ್ ವಾರ್ಷಿಕದ ನಾಟಕದಲ್ಲಿ ಶಕುಂತಳಾ ಪಾತ್ರವಹಿಸಿದ್ದಳು. ಅವಳ ದಿಟವಾದ ಹೆಸರೂ ಶಕುಂತಳಾ. ಬಲು ಸೊಬಗುಗಾತಿ. ಬಲು ಸುಂದರ ಯುವತಿ.

ಶಕುಂತಳಾ ತಂದೆಗೆ ಒಬ್ಬಳೇ ಮಗಳು, ಪೇಟೆಯಲ್ಲಿ ೬೦೦ ರೂಪಾಯಿ ಬಾಡಿಗೆ ಬರುವ, ೧೨ ಮನೆಗಳ ಒಡೆಯನ ಮಗಳು. ಅಣ್ಣತಮ್ಮಂದಿರೂ ಇದ್ದಿಲ್ಲ. ಅವಳಿಗೆ ೧೬ ವರ್ಷದ ಪ್ರಾಯ. ಅಣ್ಣತಮ್ಮಂದಿರು ಆಗುವಂತೆಯೂ ಇದ್ದಿಲ್ಲ. ಅಂದಮೇಲೆ ಕೇಳಬೇಕೆ. ಆ ಕೋಮಿನ ೨೦-೩೦ ವರ್ಷದ ಹುಡುಗರಿಗೆಲ್ಲಾ ಇವಳ ಮೇಲೇ ಕಣ್ಣು. ತನುವಿಗೆ ತನು, ಧನಕ್ಕೆ ಧನ, ಇನ್ನು ಮನ ಒಪ್ಪದೇ ಏನು ಮಾಡುತ್ತೆ? ತನು ಮನ ಧನ ಅರ್ಪಿಸಲು. ಆ ಗುಂಪಿನ ಯುವಕರೆಲ್ಲಾ ಸಿದ್ಧರಾಗಿದ್ದರು.

ಬೈರಾ ಪಟ್ಟಣದ ಭೀಮರಾಯ ಪ್ರಸಿದ್ಧನಾದ ಲಾಯರು. ಒಬ್ಬನೇ ಮಗ. ಐ. ಎ. ಎಸ್.ಗೆ ಹೊಂಚುತ್ತಿದ್ದ ಮಗ. ಪೇಟೇಲಿ ಮೂರು ಮನೆ ಮಾಲೀಕ. ಆದರೆ ಒಂದೇ ಕಳಂಕ.—ಆರು ಜನ ಮದುವೆಯಾಗದ ಹೆಣ್ಣು ಮಕ್ಕಳು—ಆದರೂ ಮಗ ಮನ್ಮಥನ ಪ್ರತಿರೂಪ. ಹೆಸರು ರಾಜಾರಾಯ—ಹೆಸರಿಗೆ ತಕ್ಕಂತೆ ರಾಜನ ಹಾಗಿದ್ದ.

ರುದ್ರನಗರದ ಶಾಮರಾಯ ಪ್ರಸಿದ್ಧನಾದ ಕ್ರಿಕೆಟ್ ಆಟಗಾರ. ದೇಶದ ಮೊದಲ ಹನ್ನೊಂದರಲ್ಲಿ ಅವನೂ ಒಬ್ಬ. ದೇಶಾದ್ಯಂತ ದೇಶದ ದೊಡ್ಡ

ದೊಡ್ಡ ವ್ಯಕ್ತಿಗಳೆನಿಸಿಕೊಂಡ ಎಲ್ಲ ಮಹನೀಯರ ಕೈಯನ್ನೂ ಆತ ಒಮ್ಮೆ ಯಾದರೂ ಕುಲುಕಿದ್ದ. ಅಂತಹ ಪ್ರಚಂಡ ಹುಡುಗ. ಕಾಲೇಜಿನಲ್ಲೂ ಓದು ತ್ತಿದ್ದ. ಎಂದಾದರೂ ಹೇಗಾದರೂ ಕಾಲೇಜು ಮುಗಿಯಲೇ ಬೇಕು. ಮುಗಿದಮೇಲೆ, ಯಾವುದಾದರೂ ವಾಣಿಜ್ಯ ವ್ಯವಸ್ಥೆಯಲ್ಲಿ ಒಂದು ದೊಡ್ಡ ಹುದ್ದೆ ಸಿಕ್ಕೇ ಸಿಗುತ್ತೆ ಅಂತ ಧೈರ್ಯವಾಗಿದ್ದ ಶಾಮುರಾಯ.

ಅವನ ತಂದೆ ಬಾಡಿಗೆ ಹತೋಟಿ ಅಧಿಕಾರಿ, ಪೇಟೆಯಲ್ಲಿ ಅಂತಹ ಹೇಳಿ ಕೊಳ್ಳುವಂತಹ ಹಿರಿಯ ವ್ಯಕ್ತಿ ಅಲ್ಲ. ಆದರೂ ಬಳಲಿ ಬೆಂಡಾದ ಮನೆಯಿಲ್ಲದ ದಾರಿಹೋಕರಿಗೆ, ಮನೆಗಳಿದ್ದ ಮಾಲೀಕರಿಗೆ ಆತನೇ ದೈವ ರೂಪಿ.

* * *

ಶಕುಂತಳಾ—ರಾಜಾರಾಯ—ಶಾಮುರಾಯ—ಎಲ್ಲರೂ ಒಂದೇ ಜಾತಿ, ಒಂದೇ ಅಂತರ್ಜಾತಿ, ದೂರದೂರದ ಸಂಬಂಧ ಕೂಡ. ಜಾತಕಗಳೂ ಕೂಡಿ ಬರುತ್ತಿತ್ತು. ನಕ್ಷತ್ರಗಳೂ ಒಗ್ಗುತ್ತಿತ್ತು. ದ್ವಾದಶ ಕೂಟಗಳೂ ಕೂಡುತ್ತಿತ್ತು—ಇಬ್ಬರು ಹುಡುಗರದೂ ಮತ್ತು ಹುಡುಗಿಯದು.

* * *

ಶಕುಂತಳಾ ಅಪ್ಪನಿಗೆ ಈಗ ಬಲು ಯೋಚನೆಗಿಟ್ಟುಕೊಂಡಿತ್ತು. ಅವನ ಜಾತಿ, ಅಂತರ್ಜಾತಿಯಲ್ಲಿ, ಯಾವ ಹುಡುಗನಾದರೂ ಶಕುಂತಳಾ ಕೈ ಹಿಡಿ ಯಲು, ಕಡೆಗೆ ಕಾಲು ಹಿಡಿಯಲೂ ಸಿದ್ಧರಾಗಿದ್ದರು.

ರಾಜಾರಾಯ ಅವಳಿಗೆ ತಕ್ಕ ಸುಂದರ ವರ. ಬುದ್ಧಿವಂತ. ಸ್ಥಿತಿವಂತ. ಭವಿಷ್ಯ ಬಲು ಚೆನ್ನಾಗಿದ್ದ ಯುವಕ.

ಆದರೆ, ಆರು ಜನ ತಂಗಿಯರು. ತಂಗಿಯರೆಲ್ಲಾ ಅಪ್ಪನನ್ನು ಹೋತು ಕೊಂಡವರು. ಮಗನೊಬ್ಬನೇ ತಾಯಿಯಂತೆ. ಅಂದಮೇಲೆ ಐ. ಎ. ಎಸ್. ಘಟಿಸಿದರೂ, ಇದ್ದ ಮೂರು ಮನೆ ಮಾರಿದರೂ, ಈ ಆರು ಜನರಿಗೆ ಆರು ಮನೆ ಹೊಂದಿಸೋ ಹೊತ್ತಿಗೆ ಯಾರಾದರೂ ಸ್ವಲ್ಪ ಸುಸ್ತುಹೊಡೆಯಲೇ ಬೇಕು

ಶ್ಯಾಮುರಾಯ ಧೃಡಕಾಯ. ಕೆಚ್ಚೆದೆಯ ಯುವಕ. ಎಂತಹ ರಾಕ್ಷಸ ಬೌಲಿಂಗನ್ನೂ ಲೀಲಾಜಾಲವಾಗಿ ಎದುರಿ ಹತೋಟಿಗೆ ತಂದವ. ಐ. ಎ. ಎಸ್. ಬೇಡವೇ ಬೇಡ. ಅದರ ಮೂರರಷ್ಟು ಸಂಬಳ ದೊರೆಯುವ ವಾಣಿಜ್ಯ ಸಂಸ್ಥೆಯ ಕೆಲಸ ಖಾತರಿ. ಅಂತಹ ಯುವಕನಿಗೆ.

ಆದರೆ ಹೆಸರು ಹೇಳಿಕೊಳ್ಳುವಂತಹ ವಂಶವಲ್ಲ. ಆದರೂ ಬೂದಿ ಮುಚ್ಚಿದ ಕೆಂಡವಾಗಿರಬಹುದು ಎಂದು ಅನುಮಾನ. ಅಕ್ಕತಂಗಿಯರೇನೂ ಇಲ್ಲ. ಭವಿಷ್ಯದಲ್ಲಿ ಕಂಟಕವೇನೂ ಕಾಣಬರುವುದಿಲ್ಲ.

ಆ ಹುಡುಗ ಚೆಂದವೋ
ಈ ಹುಡುಗ ಚೆಂದವೋ

ಎಂದನ್ನಿಸುತ್ತಿತ್ತು ಶಕುಂತಳಾ ಅಪ್ಪನಿಗೆ.

*　　　*　　　*

ನೀವನ್ನಬಹುದು ಇದರಲ್ಲಿ ಶಕುಂತಳೆಯ ಅಭಿಪ್ರಾಯಕ್ಕೆ ಮನ್ನಣೆ ಇಲ್ಲವೋ? ಅವಳ ಅಭಿಲಾಷೆ ಕೇಳಬೇಡವೇ? ನವೀನ ಹುಡುಗಿ—ಓದಿದ ಯುವತಿ,— ಮುಂಬರುವ ಮಹಿಳೆ—ಅವಳ ಒಲವು ಎತ್ತ ಎಂದು.

ಆದರೆ ಅಂತಹ ಬಲು ರೂಪಿಯು, ಜವ್ವನದ, ಓದಿದ ತರುಣಿ—ಶಂಕರಾಚಾರ್ಯರು ಹೇಳಿದಂತೆ "ತರುಣಾಸಕ್ತ"ಳೇ ವಿನಹಾ ಅದೂ ಇದೂ ಎಂದು ವಿವೇಚನೆ ಮಾಡಲಾರಳು ಅಪ್ಪನ ತೀರ್ಮಾನಕ್ಕೆ ಸಿದ್ಧ. ಆಕೆಯದೊಂದೇ ಅಭಿಲಾಷೆ– ಅದನ್ನು ಮುಗಂ ಆಗಿ 'ಆಲಸ್ಯ ಮಮೃತಂ ವಿಷಂ' ಎಂದೇ ಸ್ಪಷ್ಟೀಕರಿಸುತ್ತಾಳೆ.

*　　　*　　　*

## ಹೀಗಿತ್ತು ಪೈಪೋಟಿ

*　　　*　　　*

ಖಂಡೇರಾಯ ಶಕುಂತಳೆಯ ಚಿಕ್ಕಪ್ಪನ ಹಾಗೆ. ಅವನೂ ಶಕುಂತಳೆಯ ಅಪ್ಪನೂ ಚಡ್ಡಿಗೆಳೆಯರು. ಹನ್ನೆರಡು ಮನೆಗಳನ್ನೂ ಬಾಡಿಗೆಗೆ ಕೊಡುವುದು, ಬಾಡಿಗೆ ವಸೂಲ್ ಮಾಡುವುದು, ಮನೆಬಿಡಿಸುವುದು ಹೆಚ್ಚು ಬಾಡಿಗೆಗೆ ಬೇರೊಬ್ಬರಿಗೆ ವರ್ಷದ ಮುಂಗಡ ತೆಗೆದುಕೊಂಡು ಕೊಡುವುದು ಇತ್ಯಾದಿ ಎಲ್ಲವೂ ಖಂಡೇರಾಯನ ತೀರ್ಮಾನಕ್ಕೆ ಒಳಪಟ್ಟವು.

ಆತ ಅಂದ ಅಪ್ಪನಿಗೆ—ಕಳೆದ ಆರು ತಿಂಗಳಿಂದ, ಏಳು ಮನೆಗಳ ಬಾಡಿಗೆದಾರರನ್ನು ಉಚ್ಚಾಟನೆ ಮಾಡಲು ಅಸಾಧ್ಯವಾಗಿದೆ, ಸಿಂಧಿ ನಿರಾಶ್ರಿತರು, ಒಂದಕ್ಕೆರಡು ಬಾಡಿಗೆ ಕೊಡಲು ಸಿದ್ಧರಿದ್ದಾರೆ. ಆದರೆ ನಾನೇನೂ ಮಾಡಲು ಸಾಧ್ಯವಿಲ್ಲ.

ರಾಜಾರಾಯ ಬಲು ಒಳ್ಳೇಯ ವರ. ಹೌದು ಆದರೆ ಆರು ಅವಿವಾಹಿತ ತಂಗಿಯರಿದ್ದಾರೆ.

ಶಾಮರಾಯ ಓದಿನಲ್ಲಿ ಸ್ವಲ್ಪ ಕಳಪೆಯೇ ಹೌದು. ಆದರೆ ಆತನ ತಂದೆ ಮನೆಹತೋಟಿ ಅಧಿಕಾರಿ. ಆ ಕೆಲಸದಲ್ಲಿ ಇನ್ನು ಸುಮಾರು ಆರು ವರ್ಷ ಖಾಯಂ.

*　　　*　　　*

ಎಲ್ಲವನ್ನೂ ಯೋಚಿಸಿದರೆ, ಶಕುಂತಳಾಗೆ ತಕ್ಕ ವರ ಶ್ಯಾಮರಾಯ ಅಂತ ನನಗೆ ತೋಚುತ್ತೆ. ಅಂತ ಅರ್ಥಗರ್ಭಿತ, ತನ್ನ ಅಭಿಪ್ರಾಯವನ್ನು ತೋಡಿಕೊಂಡ.

* * *

ಭಾದ್ರಪದ ಮಾಸದಲ್ಲಿ ಶಕುಂತಳಾ—ಶ್ಯಾಮರಾಯರ ವಿವಾಹ ಅಂತ ಅಚ್ಚೊತ್ತಿದ್ದ ಕಾಗದದ ತುಂಬಿದ ಚೀಲಗಳನ್ನು ಹಿಡಿದುಕೊಂಡು, ಸಾರ್ವಜನಿಕರು ಮದುವೆ ಮನೆಯಿಂದ ಹೊರಬಿದ್ದರು.

ಪೈಪೋಟಿ ಹೀಗೆ ವ್ಯವಸ್ಥೆಯಾಯಿತು.

— ಶಿಪ್ರ.

—o—

—ಇದೇನು ವ್ಯಾಪಾರವೇ ಇಲ್ವಲ್ಲಾ............!!

# ಕ್ಷೌರಾವಲೋಕನ

---

ನನ್ನ ಪಗಾರದಲ್ಲಿ ಮನೆಯವರೆಲ್ಲರೂ ಹೊಟ್ಟೆ ತುಂಬಿಕೊಳ್ಳುವುದೇ ಪ್ರಯಾಸ. ಹಾಗಿರುವಾಗ ಬಟ್ಟೇಗೆ ಹಣ ಕೇಳಿದರೆ, ನನಗೆ ಬರೆಹಾಕಿದ ಹಾಗಾಗುತ್ತೆ. "ಗೌರಿಹಬ್ಬ! ವರ್ಷಾವಧಿ ಹಬ್ಬ!! ಸೀರೇಗೆ ಒಂದು ನೂರು ಕೊಡಿ ಎಂದು ಕೈಹಿಡಿದವಳು ಕಾದಾಡಿದಳು. ಕೈ ಝಾಡಿಸಿಕೊಂಡು ಗಣೇಶನ ಹಾಗೆ ನಾನಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅಂದುಕೊಳ್ಳುತ್ತಾ ಕ್ಲಬ್ಬಿಗೆ ಹೋದೆ.

ಕೊರವ ಮಂದಸ್ಮಿತನಾಗಿ ಕುಳಿತಿದ್ದ. ಅಂದರೆ ಇಸ್ಪೀಟಿನಲ್ಲಿ ಸಂಪಾದನೆ ಆಗಿಯೇ ಇದ್ದಿರಬೇಕು ಎಂದು ನನಗೆ ತೋಚಿತು. ಇಂತಹವನ, ಸುಖದಲ್ಲಿರುವವನ ಸಂಗ, ನನ್ನಂತಹ ದುಃಖಿಗೆ ಆ ಸಾಯಂಕಾಲ ಏಕೆ? ಎಂದು ಆ ಕಡೆ ಹಾದುಹೋಗುತ್ತಿದ್ದೆ.

ಕೊರವ ನನ್ನ ಕರೆದ. ಅವನು ಕರೆದರೆ, ಯಮನೂ ಕೂಡ ಆ ಧ್ವನಿಗೆ ಬೆದರಿ ಇವನ ಹಿಂದೆಯೇ ಹಿಂಬಾಲಿಸುವ ಪರಿಸ್ಥಿತಿ. ಮೌನವಾಗಿ ಅವನ ಮೇಜಿನ ಬಳಿ ಕುಳಿತೆ.

"ಯಾಕೋ? ವರ್ಷಾವಧಿ ಹಬ್ಬ ಬರುವ ದಿನ. ನೀನೇಕೆ ಹೀಗೆ" ಎಂದ.

ಇದನ್ನು ಕೇಳಿದ ಧ್ವನಿ, ಮಗುವಿನ ದನಿ. ನಾನೂ ಕರಗಿ ದನಿ ಕೂಡಿಸಿದೆ. ನನ್ನ ಕಷ್ಟವನ್ನೆಲ್ಲಾ ಅವನೆದುರಿಗೆ ತೋಡಿಕೊಂಡೆ. "ಹೀಗೆ ಹೆಂಡತಿ ಸೀರೇಗೆ ನೂರು ಅಂತ ಕೇಳಿದಳು. 'ನಿನ್ನ ಬೀರುವಿನಲ್ಲಿ ಹತ್ತು ಸೀರೆ ಇದೆ. ನನ್ನ ಹತ್ತಿರ ಹತ್ತು ರೂಪಾಯಿ ಕೂಡ ಇಲ್ಲ' ಈಗೇಕೆ ಸೀರೆ ಅಂತ. ಅವಳಂದಳು 'ಹತ್ತು ಸೀರೆ ಏನು ಅಕ್ಷಯವಾಗುತ್ತದೆಯೇ. ನಾನೇನು ದ್ರೌಪದಿಯೆ! ಉಟ್ಟ ಸೀರೆ ಹರಿಯೊಲ್ಲವೇ' ಅಂತ. ಅಲ್ಲಿನ ತನಕ ಅರ್ಜುನನ ಹಾಗೆ ಇದ್ದ ನಾನು, ಭೀಮಾವತಾರ ತಾಳಿ ಕ್ಲಬ್ಬಿಗೆ ಬಂದೆ ಮಾರುತ್ತರ ಕೊಡಲಾರದೆ."

ಕೊರವ ಪೂರ್ಣ ಸಹಾನುಭೂತಿ ತೋರಿಸಿ, "ಇದಕ್ಕೊಂದೇ ಉಪಾಯ" ಮಾತಿನಲ್ಲಿ ಗೆಲ್ಲಬೇಕು. ಮನೆಗೆ ಹೋಗಿ ಹೇಳು, ಸೀರೆ ಅಕ್ಷಯವಾಗಬೇಕಾದರೆ ದ್ರೌಪದಿಯ ಹಾಗೆ ಐದು ಜನ ಗಂಡಂದಿರಿರಬೇಕು. ಒಬ್ಬ ಗಂಡನ ಕೈಲಿ ಅಷ್ಟು ಸೀರೆ ಸರಬರಾಜು ಅಸಾಧ್ಯ" ಅಂತ ಹೇಳಿದ.

ಬಲು ಚೂಟಿಯಾದ ಉತ್ತರ ಕೊಡವ, ಈಗಲೇ ಹೋಗಿ ಅವಳ ಮೂಗು ಮುರಿಯುವ ಹಾಗೆ ಇದನ್ನು ಹೇಳುತ್ತೇನೆ" ಎಂದು ಹೊರಡಲು ಕಾಲು ಸೆಳೆದ ಮೇಜಿನ ಕೆಳಗಿಂದ.

"ಅವಸರ ಪಡಬೇಡಾ! ಮಿತ್ರಾ!! ನೀನು ಹೀಗೆ ಹೋಗಿ ಹೇಳಿದರೆ ಆಕೆ ಹಾಗೇ ಆಗಲಿ ಅಂತ ಹೇಳಿ, ಅಕ್ಷಯ ಸೀರೆ ಸಾಧಿಸಿಯೇ ಬಿಟ್ಟರೆ ನಿನ್ನ ಗತಿ!" ಎಂದು ಎಚ್ಚರಿಸಿದ.

ತಿರುಗಿ ಕಾಲುಗಳನ್ನು ಮೇಜಿನ ಕೆಳಕ್ಕೆ ನೂಕಿ, ಸುಸ್ತಾಗಿ ಕೂತ; ಬೆವರ ಹನಿಯನ್ನು ಒರಸಿಕೊಳ್ಳುತ್ತಾ.





ಖಂಡಿತ ಟಿಕೆಟ್ ಕೊಂಡುಕೊಳ್ಳಬೇಕೆಂದಿದ್ದೆ ಸಾರ್! ಆದರೆ ಅವರೇ ಟಿಕೆಟ್ ಮುಗಿದುಹೋಗಿದೆ ಅಂದರು—ನಾನೇನು ಮಾಡಲಿ?

త్వరలో!

తాళికట్టినవాడు తలపెట్టినాడు
ఈ పరాభవము నదే అగ్నిదేవా.

# స్త్రీ సాహసము

దర్శకత్వము
వేదాంతం రాఘవయ్య

రచన, పర్యవేక్షణ.....సముద్రాల ** సంగీతం......సుబ్బరామన్

ఛాయాగ్రహణం .... రంగా ... కళ . . వాలి & గోడగాంకర్...

ANDHRA CEDED AND NIZAM:
**A POORNA Release**
**VIJAYAWADA**

MYSORE:
**AMRIT PICTURES**
**BANGALORE-2**

## ಯಶಸ್ವಿಯಾಗಿ ಪ್ರದರ್ಶಿಸಲ್ಪಡುತ್ತಿದೆ!

ಬೆಂಗಳೂರು:

# ಸೂಪರ್ ★ ಶಾರದಾ

ಮೈಸೂರು:

# ★ ರಾಜಕಮಲ್ ★

ದಾವಣಗೆರೆ: **ಶಾಂತಿ ಪಿಕ್ಚರ್ ಹೌಸ್**

ಹಾಸನ: **ಪಿಕ್ಚರ್ ಪ್ಯಾಲೆಸ್**

**ಚಿತ್ರಮಂದಿರಗಳಲ್ಲಿ ದಿನವಹಿ ೩ ಪ್ರದರ್ಶನಗಳು**



ಮಹಾತ್ಮಾರವರ—

# ಜಗನ್ಮೋಹಿನಿ

(ಕನ್ನಡ)

**ಹರಿಣಿ, ಪ್ರತಿಮಾದೇವಿ, ಜಯಶ್ರೀ, ರಾಧಾಬಾಯಿ, ಶ್ರೀನಿವಾಸರಾವ್, ಮಹಾಬಲರಾವ್, ವೀರಭದ್ರಪ್ಪ, ಈಶ್ವರಪ್ಪ ಮುಂತಾದವರ ಅಭಿನಯ**

★

## ಶೀಘ್ರದಲ್ಲಿಯೇ ನಿರೀಕ್ಷಿಸಿ

ಚಿತ್ರದುರ್ಗ: **ರೂಪವಾಣಿ**

ಅರಸೀಕೆರೆ: **ಕೃಷ್ಣ**

ಶಿವಮೊಗ್ಗ: **ಕೃಷ್ಣ**

ಚಿಕ್ಕಮಗಳೂರು: **ಜ್ಯೋತಿ ಸೆಂಟ್ರಲ್**

**ಮತ್ತು ತುಮಕೂರು ಕೇಂದ್ರಗಳು**

ನಿರ್ಮಾಪಕ ಮತ್ತು ನಿರ್ದೇಶಕ:—**ಡಿ. ಶಂಕರ್‌ಸಿಂಗ್**



*Distributors*—

For Mysore State, S. Canara, Coorg, Ceded and Chittoor Dist.

**SHANTA PICTURES**

**Gandinagar, BANGALORE-2**

FOR BOMBAY PRESIDENCY

**PRAKASH PICTURES**

**HUBLI**

*For other areas Contact*: N. V. GOPALA SETTY

**Jewellers' Chowk, BANGALORE-2**

---

**ಪ್ರತಿಯೊಂದು ಸಂಸಾರವೂ ನೋಡಿ ಆನಂದಪಡಬೇಕಾದ ಚಿತ್ರ**



ಗಣಪತಿ ಪಿಕ್ಚರ್ಸ್‌ರವರ

# ದೇವಕಿ (ತಮಿಳು)

ಭೂಮಿಕೆಯಲ್ಲಿ: —

ಮಾಧುರಿದೇವಿ – ಜಾನಕಿ – ಲಲಿತ – ಪದ್ಮಿನಿ – ರಾಗಿಣಿ

ಕಣ್ಣಪ್ಪ – ಬಾಲಚಂದರ್ – ನಂಬಿಯಾರ್ ಮುಂತಾದವರ ಅಭಿನಯ

★

ಕಿಕ್ಕಿರಿದ ಪ್ರೇಕ್ಷಕವೃಂದಕ್ಕೆ ಈಗ ಪ್ರದರ್ಶಿತವಾಗುತ್ತಲಿರುವ ಕೇಂದ್ರಗಳು

**ಬೆಂಗಳೂರು**

ಗೀತಾ ಮತ್ತು ಶ್ರೀ

**ಮೈಸೂರು**

ಚಾಮುಂಡೇಶ್ವರಿ

**ಕೆ.ಜಿ.ಎಫ್.** ಕೃಷ್ಣ

**ದಾವಣಗೆರೆ** ಮೋತಿ ಟಾಕೀಸ್

A TALLAM RELEASE

Printed by B. S. Iyengar, Bangalore City
Publisher—B. N. Gupta. Editor—M. Sivaram